ಶ್ರೀ ತೋಟಕಾಚಾರ್ಯಪ್ರಣೀತಂ

# ಶ್ರುತಿಸಾರಸಮುದ್ಧರಣಮ್

(ಕನ್ನಡ ಅನುವಾದ ಸಹಿತ)

ಅನುವಾದ :

**ವಿದ್ವಾನ್ ಎನ್. ರಂಗನಾಥಶರ್ಮಾ**



ಶ್ರೀತೋಟಕಾಚಾರ್ಯಪ್ರಣೀತಂ

# ಶ್ರುತಿ ಸಾರ ಸಮುದ್ಧರಣಮ್

(ಕನ್ನಡ ಅನುವಾದ ಸಹಿತ)



ಅನುವಾದ:

ವಿದ್ವಾನ್ ಎನ್. ರಂಗನಾಥಶರ್ಮಾ




ಉದಯ ಪ್ರಕಾಶನ

ನಂ. 984, 11ನೇ 'ಎ' ಮುಖ್ಯರಸ್ತೆ

3ನೇ ವಿಭಾಗ, ರಾಜಾಜಿನಗರ

ಬೆಂಗಳೂರು_10



ಹೃದಯೇ ಕಲಯೇ ವಿಮಲಂ ಚರಣಂ ಭವ ಶಂಕರದೇಶಿಕ ಮೇ ಶರಣಮ್

# ಪ್ರಸ್ತಾವನೆ

ಇದು ಶ್ರೀಶಂಕರಭಗತ್ಪಾದರ ಶಿಷ್ಯರಾದ ಶ್ರೀತೋಟಕಾಚಾರ್ಯರ ಕೃತಿ. ಭಗವತ್ಪಾದರ ಶಿಷ್ಯವರ್ಗದಲ್ಲಿ ಪದ್ಮಪಾದಾಚಾರ್ಯ, ಸುರೇಶ್ವರಾಚಾರ್ಯ, ಹಸ್ತಾಮಲಕಾಚಾರ್ಯ ಮತ್ತು ತೋಟಕಾಚಾರ್ಯ ಎಂಬ ನಾಲ್ವರು ಪ್ರಮುಖರೆಂಬುದು ಸುಪ್ರಸಿದ್ಧವಾಗಿದೆ. ಎಲ್ಲ ಶಂಕರವಿಜಯಗಳಲ್ಲಿಯೂ ಈ ನಾಲ್ವರ ಹೆಸರು ದೊರೆಯುತ್ತದೆ. ಶ್ರುತಿಸಾರಸಮುದ್ಧರಣವನ್ನು ತೋಟಕವೃತ್ತಗಳಲ್ಲಿ ರಚಿಸಿದ್ದರಿಂದ ತೋಟಕಾಚಾರ್ಯರಿಗೆ ಈ ಹೆಸರು ಬಂದಿತೆಂದು ಹೇಳುತ್ತಾರೆ. ಕೆಲವು ಗ್ರಂಥಗಳಲ್ಲಿ ತ್ರೋಟಕಾಚಾರ್ಯ ಎಂದು ವ್ಯವಹಾರವಿರುವುದು ಕಂಡು ಬರುತ್ತದೆ. ತೋಟಕ ವೃತ್ತದ ನಿಮಿತ್ತದಿಂದ ಈ ಹೆಸರು ಬಂದಿರುವುದಾದರೆ, ತೋಟಕಾಚಾರ್ಯ ಎಂಬುದೇ ಸರಿ. ಏಕೆಂದರೆ, ವೃತ್ತದ ಹೆಸರು ತೋಟಕವೆಂದು ಲಕ್ಷಣಗ್ರಂಥಗಳಲ್ಲಿದೆ. ಹಾಗಿಲ್ಲದಿದ್ದರೆ ತ್ರೋಟಕಾಚಾರ್ಯ ಎಂಬ ನಾಮವು ಯುಕ್ತವೆನ್ನಬಹುದು. ತ್ರುಟ – ಛೇದನೇ ಎಂಬ ಧಾತುವಿನ ರೂಪ ಇದು. ಅಜ್ಞಾನಂ ತ್ರೋಟಯತೀತಿ ತ್ರೋಟಕಃ – ಎಂದು ವ್ಯುತ್ಪತ್ತಿಯನ್ನು ಹೇಳಬಹುದು ಅಜ್ಞಾನವನ್ನು ಹೋಗಲಾಡಿಸತಕ್ಕವನು ಎಂದು ಶಬ್ದಾರ್ಥವಾಗುತ್ತದೆ.

ತೋಟಕಾಚಾರ್ಯರಿಗೆ ಆನಂದಗಿರಿ ಎಂಬ ಇನ್ನೊಂದು ನಾಮವಿತ್ತು. ಮಠಾಮ್ನಾಯದಲ್ಲಿ 'ತೋಟಕಂ ಚಾನಂದಗಿರಿಂ ಪ್ರಣಮಾಮಿ ಜಗದ್ಗುರುಂ' ಎಂದು ಹೇಳಿದೆ. ಆನಂದಗಿರಿ ಎಂಬುದು ಅವರ ಸಂನ್ಯಾಸಾಶ್ರಮ ಪ್ರಯುಕ್ತವಾದ ನಾಮವಿರಬಹುದು. ಶ್ರೀಶಂಕರಾಚಾರ್ಯರು ಬದರಿಕಾಶ್ರಮದ ಬಳಿ ತಾವು ಸ್ಥಾಪಿಸಿದ ಜ್ಯೋತಿರ್ಮಠಕ್ಕೆ (ಜೋಶಿಮಠ) ಇವರನ್ನು ಅಧ್ಯಕ್ಷರನ್ನಾಗಿ ನಿಯಮಿಸಿದರು. ಈಗಲೂ ಅಲ್ಲಿಯ ಸ್ವಾಮಿಗಳಿಗೆ 'ಗಿರಿ' ಎಂದು ಆಶ್ರಮ ಪ್ರಯುಕ್ತವಾದ ಉಪನಾಮವಿದೆ. ಶಾಂಕರ ಭಾಷ್ಯಗಳಿಗೆ ವ್ಯಾಖ್ಯಾನವನ್ನು ಬರೆದ ಆನಂದಗಿರಿ ಎಂಬವರು ತೋಟಕಾಚಾರ್ಯರಲ್ಲ. ವ್ಯಾಖ್ಯಾನಕಾರರಾದ ಆನಂದಗಿರಿ ಎಂಬುವರ ನಿಜವಾದ ನಾಮ ಆನಂದಜ್ಞಾನ. ಇವರು ತೋಟಕಾಚಾರ್ಯರಿಗಿಂತ ತುಂಬಾ ಈಚಿನವರು. ಈ ವ್ಯಾಖ್ಯಾನಕಾರರು ತಮ್ಮನ್ನು ಎಲ್ಲ ವ್ಯಾಖ್ಯಾನಗಳ ಪುಷ್ಪಿಕೆಗಳಲ್ಲಿಯೂ ತಾವು ಶ್ರೀಶುದ್ಧಾನಂದ ಪೂಜ್ಯಪಾದ ಶಿಷ್ಯರೆಂದೂ ತಮ್ಮ ಹೆಸರು ಆನಂದಜ್ಞಾನ – ಎಂದು ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. ಇವರಿಗೆ ಆನಂದಗಿರಿ ಎಂಬ ವ್ಯವಹಾರ ಹೇಗೋ ಬಂದು ಬಿಟ್ಟಿದೆ.

ತೋಟಕಾಚಾರ್ಯರ ಪೂರ್ವವೃತ್ತಾಂತವು ಸರಿಯಾಗಿ ತಿಳಿದು ಬಂದಿಲ್ಲ. ಇವರು ವಿಶ್ವನಾಥಾಧ್ವರಿಯ ಪುತ್ರರೆಂದೂ, ಕಲಾನಾಥ ಎಂಬುದು ಬಾಲ್ಯದ ಹೆಸರೆಂದೂ ಕಾಶಿಯಲ್ಲಿ ಶ್ರೀಶಂಕರಾಚಾರ್ಯರ ದರ್ಶನಮಾಡಿ ಶಿಷ್ಯರಾದರೆಂದೂ ಚಿದ್ವಿಲಾಸೀಯ

ಶಂಕರವಿಜಯದಲ್ಲಿ ಬರೆದಿದೆ. ಮಾಧವೀಯ ಶಂಕರ ದಿಗ್ವಿಜಯದಲ್ಲಿ ಕೆಳಗೆ ಕಂಡ ಅಂಶ ದೊರೆಯುತ್ತದೆ. ಭಗವತ್ಪಾದರು ಶೃಂಗೇರಿಯಲ್ಲಿದ್ದು ಶಿಷ್ಯರಿಗೆ ವೇದಾಂತ ಭಾಷ್ಯಗಳ ಪಾಠ ಹೇಳುತ್ತಿದ್ದಾಗ ನಡೆದ ಸಂನ್ನಿವೇಶವಿದು. "ಶ್ರೀ ಶಂಕರಾಚಾರ್ಯರ ಶಿಷ್ಯರಲ್ಲಿ ಧರ್ಮನಿಷ್ಠನಾದ ಒಬ್ಬನು ಗುರುಚಿತ್ತಾನುವರ್ತಿಯಾಗಿ ಅವರ ಸೇವೆ ಮಾಡಿಕೊಂಡಿದ್ದನು. ಅವನು ಹೆಚ್ಚು ಮಾತನಾಡುವ ಸ್ವಭಾವದವನಲ್ಲ. ತಾನು ಸ್ನಾನ ಮಾಡಿ ಬಂದು ಗುರುಗಳಿಗೆ ಮೃದುವಾದ ಆಸನವನ್ನು ಸಿದ್ಧಪಡಿಸುತ್ತಿದ್ದನು. ಹಲ್ಲುಜ್ಜುವ ಕಡ್ಡಿಯನ್ನು ತಂದು ಕೊಡುವುದು, ನೀರನ್ನು ತುಂಬಿಡುವುದು, ಸ್ನಾನಕ್ಕೆ ಅಣಿಮಾಡುವುದು, ಗುರುಗಳ ಪಾದಗಳನ್ನೊತ್ತುವುದು–ಮುಂತಾದ ಶುಶ್ರೂಷಾಕಾರ್ಯ ದಲ್ಲಿನಿರತನಾಗಿದ್ದನು. ಅವರೆದುರಿಗೆ ಆಕಳಿಸುತ್ತಿರಲಿಲ್ಲ. ಕಾಲು ಚಾಚಿ ಕುಳಿತುಕೊಳ್ಳು ತ್ತಿರಲಿಲ್ಲ. ಅವರು ಹೊರಟರೆ ಹೊರಡುತ್ತಿದ್ದ, ನಿಂತರೆ ನಿಲ್ಲುತ್ತಿದ್ದ. ಅವರು ಏನು ಹೇಳಿದರೂ ವಿಧೇಯನಾಗಿ ಅಂತೆಯೇ ನಡೆಯುತ್ತಿದ್ದ. ಒಂದು ದಿನ ಆ ಶಿಷ್ಯನು ಗುರುಗಳ ವಸ್ತ್ರಗಳನ್ನೊಗೆಯಲು ನದಿಗೆ ಹೋಗಿದ್ದ. ಇತ್ತ ಶಾಸ್ತ್ರ ಪಾಠದ ಹೊತ್ತಾಗಿತ್ತು. ಆಚಾರ್ಯರು ಆ ಶಿಷ್ಯನ ಬರುವಿಕೆಗಾಗಿ ಕಾಯುತ್ತಿದ್ದರು. ಉಳಿದ ಶಿಷ್ಯರು ಶಾಂತಿ ಪಾಠವನ್ನಾರಂಭಿಸಿದರು. ಶ್ರೀಶಂಕರರು "ಗಿರಿಯೂ ಬರಲಿ" ಎಂದರು. ಆಗ ಪದ್ಮ ಪಾದರು "ಗಿರಿಯು ಮಂದಬುದ್ಧಿಯವನು. ಶಾಸ್ತ್ರಕ್ಕೆ ಅಧಿಕಾರಿಯಲ್ಲ. ಅವನಿಗಾಗಿ ಕಾಯುವುದೇಕೆ ? " ಎಂದರು. "ಇದು ಅಹಂಕಾರದ ಮಾತು. ಈತನ ಗರ್ವವನ್ನು ಅಡಗಿಸಬೇಕು" ಎಂದು ಆಚಾರ್ಯರಿಗೆ ತೋರಿತು. ಗಿರಿಯ ಮೇಲಿನ ಕಾರುಣ್ಯದಿಂದ ತಮ್ಮ ಮನೋಬಲದಿಂದ ಆಗಲೇ ಗಿರಿಗೆ ಹದಿನಾಲ್ಕು ವಿದ್ಯೆಗಳೂ ಬರುವಂತೆ ಉಪದೇಶಿಸಿ ಅನುಗ್ರಹಿಸಿದರು. ತಮ್ಮ ಮಹಿಮೆಯಿಂದ ಅವನನ್ನು ಶಾಸ್ತ್ರಪಾರಂಗ ತನನ್ನಾಗಿ ಮಾಡಿದರು. ಗಿರಿಯು ಗುರುಗಳ ಅನುಗ್ರಹದಿಂದ ಶಾಸ್ತ್ರಪಾರಂಗತನಾಗಿ ನದಿಯಿಂದ ಬಂದೊಡನೆ ಪರತತ್ತ್ವ ಬೋಧಕವಾದ ತೋಟಕ ವೃತ್ತಗಳಿಂದ ಗುರುಗಳನ್ನು ಸ್ತುತಿಸಿದನು. ಎಲ್ಲರೂ ಅವನ ಪಾಂಡಿತ್ಯವನ್ನು ಕಂಡು ವಿಸ್ಮಿತರಾದರು. ಗುರುಸೇವೆ ಈ ರೀತಿ ಫಲಿಸಿತು.ಈ ಬಗೆಯಲ್ಲಿ ಗಿರಿಯು ತೋಟಕ ವೃತ್ತಗಳಲ್ಲಿ ಆಶು ಕವಿತೆಯಿಂದ ಸ್ತುತಿಸಿದ ನಿಮಿತ್ತದಿಂದ ತೋಟಕಾಚಾರ್ಯನೆಂದೇ ಪ್ರಸಿದ್ಧನಾದನು. ಪದ್ಮಪಾದಾದಿಗಳಂತೆ ಆಚಾರ್ಯರ ಪ್ರಮುಖಶಿಷ್ಯನಾದನು. ಪದ್ಮಪಾದರ ಅಹಂಕಾರ ಅಡಗಿತು॥.

(ಮಾಧವೀಯ ಶಂಕರದಿಗ್ವಿಜಯದ ೧೬ ನೆಯ ಸರ್ಗದಲ್ಲಿರುವ ೭೦–೮೦ ಶ್ಲೋಕಗಳ ಸಾರಾಂಶ)

ಗಿರಿಯು ತನ್ನ ಮಧುರ ಕಂಠದಿಂದ,

> ವಿದಿತಾಖಿಲ ಶಾಸ್ತ್ರ ಸುಧಾಜಲಧೇ
> ಮಹಿತೋಪನಿಷತ್‌ಕಥಿತಾರ್ಥನಿಧೇ ।
> ಹೃದಯೇ ಕಲಯೇ ವಿಮಲಂ ಚರಣಂ
> ಭವ ಶಂಕರದೇಶಿಕ ಮೇ ಶರಣಮ್ ॥

ಇತ್ಯಾದಿ ಕೆಲವು ಪದ್ಯಗಳನ್ನು ಮಾತ್ರ ಪಠಿಸಿದನೆಂದೂ ಈ ಸಮಸ್ತ ಗ್ರಂಥವನ್ನು ಆಗಲೇ ಗುರುಗಳ ಎದುರಿಗೆ ಹೇಳಿದನೆಂದೂ ಶಂಕರದಿಗ್ವಿಜಯದ ವ್ಯಾಖ್ಯಾನಕಾರರು ವಿಭಿನ್ನರೀತಿಯಲ್ಲಿ ಹೇಳಿದ್ದಾರೆ. "ಸ್ತುತಿರೂಪವಾದ ಎಂಟು ಶ್ಲೋಕಗಳನ್ನು ಮಾತ್ರ ಆಗ ಪಠಿಸಿರಬಹುದು. ಅನಂತರ ತನ್ನ ಗುರುಗಳ ಆಜ್ಞೆಯಂತೆ ತೋಟಕವೃತ್ತದಲ್ಲಿಯೇ ಈ ಗ್ರಂಥವನ್ನು ರಚಿಸಿರಬೇಕು". ಎಂಬ ಊಹೆ ಸರಿಯೆಂದು ತೋರುತ್ತದೆ. ಈ ಎಂಟು ಶ್ಲೋಕಗಳನ್ನು 'ಶ್ರೀ ಶಂಕರದೇಶಿಕಾಷ್ಟಕ' ಎಂಬ ಹೆಸರಿನಿಂದ ಈ ಪುಸ್ತಕದಲ್ಲಿ ಪ್ರಕಟಿಸಲಾಗಿದೆ. ಇವುಗಳಲ್ಲಿ ಯಾವುದೂ ಶ್ರುತಿಸಾರಸಮುದ್ಧರಣದಲ್ಲಿ ದೊರೆಯುವುದಿಲ್ಲ.

'ಇಹ ತೋಟಕಮಂಬುಧಿಸೈಃ ಪ್ರಥಿತಂ' ಎಂಬುದು ತೋಟಕ ವೃತ್ತದ ಲಕ್ಷಣ. ಶ್ಲೋಕದ ಪ್ರತಿಯೊಂದು ಪಾದದಲ್ಲಿ ನಾಲ್ಕುಸಗಣಗಳು ಕ್ರಮವಾಗಿ ಬರುತ್ತವೆ. ಶ್ರುತಿಮನೋಹರವಾದ ಈ ಶ್ಲೋಕಗಳು ಗೇಯಕಾವ್ಯದಂತೆ ಹಾಡಲು ಯೋಗ್ಯ ವಾದವು. ತೊಟಕಾಚಾರ್ಯರ ಲಲಿತಶೈಲಿ ಶ್ರೀಶಂಕರಾಚಾರ್ಯರ ಭಜಗೋವಿಂದ ಸ್ತೋತ್ರವನ್ನು ನೆನಪಿಗೆ ತರುತ್ತದೆ. ವೈದರ್ಭೀರೀತಿಯ ಪದಬಂಧ, ಒಂದಕ್ಕೊಂದು ಹೊಂದಿಕೊಳ್ಳುವ ವರ್ಣಗಳ ಶಯ್ಯೆ ಮನೋಜ್ಞವಾಗಿದೆ. ಶ್ರುತಿಸಾರ ಸಮುದ್ಧರ ಣ-ಎಂಬ ಗ್ರಂಥನಾಮವು ಈ ವೃತ್ತದಲ್ಲಿ ಅಚ್ಚುಕಟ್ಟಾಗಿ ಹೊಂದಿಕೊಳ್ಳುತ್ತದೆ. ಶ್ರೀತೋಟಕಾಚಾರ್ಯರ ಕವಿತಾಶಕ್ತಿ ವೈದುಷ್ಯಗಳು ವಿಸ್ಮಯಕರವಾದವು. ಈ ಶ್ರೇಷ್ಠಕೃತಿ ಬಹು ಜನರಿಗೆ ಇನ್ನೂ ಅಪರಿಚಿತವಾಗಿಯೇ ಇರುವುದು ಇನ್ನೊಂದು ವಿಸ್ಮಯ. ಈ ಕೃತಿಗೆ ಸಮುಚಿತವಾದ ಪ್ರಚಾರ ದೊರಕದೆ ಹೋಗಿದೆ.

ಶ್ರುತಿಸಾರಸಮುದ್ಧರಣದಲ್ಲಿ ಒಟ್ಟು (೧೭೯) ಶ್ಲೋಕಗಳಿವೆ. ಮೊದಲನೆಯದು ವಸಂತ ತಿಲಕಾವೃತ್ತದಲ್ಲಿಯೂ ಕಡೆಯ ಎರಡು ಶ್ಲೋಕಗಳು ಸ್ರಗ್ಧರಾವೃತ್ತದಲ್ಲಿಯೂ ಇವೆ. ಇವು ಗುರುದೇವತಾ ಸ್ತುತಿರೂಪವಾದವು. ಪ್ರತಿಪಾದ್ಯವಿಷಯವೆಲ್ಲವೂ ಉಳಿದ ೧೭೬ ತೋಟಕವೃತ್ತಗಳಲ್ಲಿ ಬಂದಿದೆ. ಭಗವತ್ಪಾದರ ಕೃಪೆಯಿಂದ ಹೊರಹೊಮ್ಮಿದ ಮತ್ತು ಅವರ ಸಾಕ್ಷಾತ್ ಶಿಷ್ಯರ ಮುಖದಿಂದ ಬಂದ ಈ ಗ್ರಂಥವು ಆಚಾರ್ಯರ ಸಿದ್ಧಾಂತವನ್ನು ಪ್ರಾಮಾಣಿಕವಾಗಿ ಪ್ರತಿಪಾದಿಸುತ್ತದೆಯೆಂದು ಮತ್ತೆ ಹೇಳಬೇಕಾದ್ದಿಲ್ಲ. ಇದರಲ್ಲಿ ವಾದ ಕೋಲಾಹಲವಿಲ್ಲ. ಪಂಡಿತ ಪ್ರಿಯವೆನಿಸುವ ಅವಚ್ಛೇದಕಾವಚ್ಛಿನ್ನಗಳ ಅರಣ್ಯವಿಲ್ಲ. ಪಾರಿಭಾಷಿಕ ವಿಷಯಗಳನ್ನೆತ್ತಿ ದೀರ್ಘಸಮಾಸಗಳಿಂದ ಪರಿಷ್ಕರಿಸುವ ಹಂಬಲವಿಲ್ಲ. ವೇದಾಂತದ ತಿರುಳನ್ನು ಸರಳ ಭಾಷೆಯಲ್ಲಿ ಸಾಮಾನ್ಯರಿಗೂ ಅರ್ಥವಾಗುವಂತೆ ತಿಳಿಯಹೇಳಬೇಕೆಂಬುದು ಶ್ರೀ ತೋಟಕಾಚಾರ್ಯರ ಮುಖ್ಯ ಉದ್ದೇಶವಾಗಿದೆ. ಲೋಕದಲ್ಲಿ ಶಮದಮಾದಿಗುಣಸಂಪನ್ನರೂ ವಿರಕ್ತರೂ ವಿವೇಕಿಗಳೂ ಮುಮುಕ್ಷುಗಳೂ ಆದ ಜನರಿರುತ್ತಾರೆ. ಅವರಿಗೆ ತರ್ಕಾದಿ ಶಾಸ್ತ್ರಗಳಲ್ಲಿ ಪಾಂಡಿತ್ಯವಿ ಲ್ಲದಿರಬಹುದು. ಅಂಥವರ ಉದ್ಧಾರಕ್ಕಾಗಿ ಅನುಕಂಪೆಯಿಂದ ಮಾಡಿದ ಲಲಿತಶೈಲಿಯ ಉಪದೇಶ ಇಲ್ಲಿದೆ. ಮೊಸರನ್ನು ಕಡೆದು ತೆಗೆದ ಬೆಣ್ಣೆಯಂತೆ, ಶ್ರುತಿಸಾಗರವನ್ನು

ಬುದ್ಧಿಯೆಂಬ ಕಡೆಗೋಲಿನಿಂದ ಕಡೆದು ಉದ್ಧರಿಸಿ ತೆಗೆದ ನವನೀತವಿದು. ಆದ್ದರಿಂದ ಶ್ರುತಿಸಾರಸಮುದ್ಧರಣವೆಂಬ ಹೆಸರು ಅನ್ವರ್ಥಕವಾಗಿದೆ. "ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ" ಎಂಬುದು ಅದ್ವೈತವೇದಾಂತದ ಸಾರ. ಇದನ್ನು ಯಾವಾತನು ದೃಢವಾಗಿ ನಂಬಿ, ಮನನಮಾಡಿ, ಹೃದ್ಗತವಾಗಿಸಿಕೊಂಡು, ತನ್ನ ನರನಾಡಿಗಳಲ್ಲಿ ಹಂಚಿ ಹರಿಯುವಂತೆ ಮಾಡಿಕೊಳ್ಳುತ್ತಾನೋ ಅವನು ಕೃತಕೃತ್ಯನೇ ಸರಿ. ಬ್ರಹ್ಮಸತ್ಯಂ, ಜಗನ್ಮಿಥ್ಯಾ, ಜೀವೋಬ್ರಹ್ಮೈವ ಎಂಬೀ ಮೂರು ಅಂಶಗಳನ್ನು ಈ ಗ್ರಂಥವು ಸಪ್ರಮಾಣವಾಗಿ ಸಾಧಿಸಿ ತಿಳಿಸಿಕೊಟ್ಟಿದೆ. ಅದಕ್ಕಾಗಿ ಆಚಾರ್ಯರು ಉದಾಹರಿಸಿದ ದೃಷ್ಟಾಂತಗಳು ಮನಸ್ಸಿಗೆ ನಾಟತಕ್ಕವು. ಸರ್ವರಿಗೂ ತಿಳಿಯುವಂತಹ ಹಿತಮಿತವಾದ ತರ್ಕವನ್ನು ಬಳಸಲಾಗಿದೆ. ಅವಸ್ಥಾತ್ರಯವನ್ನು ಸೂಕ್ಷ್ಮವಾಗಿ ವಿವೇಚಿಸಿ ಆತ್ಮನು ಕೇವಲದೃಕ್ ಸ್ವರೂಪನೆಂದು ಅನುಭವಕ್ಕೆ ಬರುವಂತೆ ವಿವೇಚಿಸಲಾಗಿದೆ. ಆತ್ಮನು ನಿರ್ಗುಣನಿರ್ವಿಶೇಷನೆಂದು ಶ್ರುತಿಪ್ರಮಾಣದಿಂದಲೂ ಯುಕ್ತಿಯಿಂದಲೂ ಸಿದ್ಧಾಂತಿಸಿ, ಉಪಾಧಿನಿಮಿತ್ತದಿಂದ ಆತನೇ ಜೀವಾತ್ಮನೆನಿಸಿಕೊಳ್ಳುತ್ತಾನೆಂದು ಆಚಾರ್ಯರು ಸಾಕಷ್ಟು ಸರಳ ಭಾಷೆಯಲ್ಲಿ ಪ್ರತಿಪಾದಿಸಿದ್ದಾರೆ. 'ತತ್‌ತ್ವಮಸಿ' ಎಂಬ ಮಹಾವಾಕ್ಯಾರ್ಥವನ್ನು ಸಮೀಕ್ಷಿಸಿ ಮನೋಹರವಾಗಿ ವಿವೇಚಿಸಿದ್ದಾರೆ. ಹಲವಾರು ಗ್ರಂಥಗಳಲ್ಲಿ ಹುಡುಕಾಡಬೇಕಾದ ವಿಚಾರಗಳೆಲ್ಲವೂ ಇಲ್ಲಿ ಸಾರವತ್ತಾಗಿ ಬಂದಿವೆ. ಜೀವೋಬ್ರಹ್ಮೈವ – ಎಂಬುದೇ ಶ್ರುತಿಪ್ರತಿಪಾದ್ಯವೆಂಬ ವಿಷಯದಲ್ಲಿ ಪೂರ್ವಗ್ರಹ ವಿಲ್ಲದ ಜಿಜ್ಞಾಸುಗಳಿಗೆ ಯಾವ ಸಂದೇಹವೂ ಉಳಿಯುವುದಿಲ್ಲ. ಹಾಗೆಯೇ ದೃಶ್ಯವಾದ ಜಗತ್ತು, ಜಗತ್ತನ್ನು ಕಾಣುವ ಮನಸ್ಸೂ ಸಹ ಮಿಥ್ಯೆಯೆಂಬುದು ಯುಕ್ತ್ಯನುಭವಗಳಿಂದ ಸಿದ್ಧವಾಗುತ್ತದೆ. ಅತ್ಯಂತ ಮೌಲಿಕವಾದ ಈ ಮೂರು ಅಂಶಗಳ ಸಿದ್ಧಾಂತವೇ ಶ್ರುತಿಗಳ ಸಾರ. ಇದನ್ನು ಶ್ರೀ ತೋಟಕಾಚಾರ್ಯರು ಹೃದಯಂಗಮವಾಗಿ ಈ ಗ್ರಂಥದಲ್ಲಿ ಎತ್ತಿ ತೋರಿಸಿದ್ದಾರೆ. ಮುಮುಕ್ಷುಗಳ ಬಾಯಲ್ಲಿ ಸದಾ ನಲಿದಾಡಬೇಕಾದ ರತ್ನಪ್ರಾಯ ಶ್ಲೋಕಗಳು ಇಲ್ಲಿವೆ. ವೇದಾಂತಿಗಳ ಕಂಠಕ್ಕೆ ಭೂಷಣವಾದ ಮುಕ್ತಾಹಾರವಿದು.

ಶ್ರೀಶಂಕರಭಗವತ್ಪಾದರ ಸಾಕ್ಷಾತ್ ಶಿಷ್ಯರಿಂದ ವಿರಚಿತವಾದ ಈ ಕೃತಿಯು ಕನ್ನಡನಾಡಿನಲ್ಲಿ ಪ್ರಚುರವಾಗಿಲ್ಲವೆಂಬುದು ಚೋದ್ಯವೇ ಸರಿ. ವಾರಣಾಸಿಯಲ್ಲಿ ಮುದ್ರಿತವಾಗಿದೆಯೆಂಬುದನ್ನು ಕೇಳಿ, ಅಂಚೆಮೂಲಕ ಒಂದು ಪ್ರತಿಯನ್ನು ತರಿಸಿ ಕೊಂಡೆನು. ಅದರಲ್ಲಿ ಹಿಂದೀ ಟೀಕೆಯೊಂದಿತ್ತು. ಪ್ರತಿಯನ್ನೋದಿದಾಗ ನನಗೆ ಬಹಳ ಸಂತೋಷವಾಯಿತು. ಇದನ್ನು ನಮ್ಮ ಜನರಲ್ಲಿ ಪ್ರಚುರಗೊಳಿಸಬೇಕೆಂಬ ಇಚ್ಛೆ ಪ್ರಬಲವಾದ್ದರಿಂದ ಕನ್ನಡಕ್ಕೆ ಅನುವಾದಮಾಡಿದೆನು. ಶ್ರೀ ಶೃಂಗೇರಿಜಗದ್ಗುರುಗಳ ದಿವ್ಯಕಟಾಕ್ಷದ ಅಡಿಯಲ್ಲಿ ಪ್ರಕಾಶನಗೊಳ್ಳುತ್ತಿರುವ 'ಶ್ರೀ ಶಂಕರಕೃಪಾ' ಮಾಸಪತ್ರಿಕೆ ಯಲ್ಲಿ ನನ್ನ ಅನುವಾದವು ಮೂಲಶ್ಲೋಕಗಳೊಡನೆ ಅನುಕ್ರಮವಾಗಿ ಪ್ರಕಟ ವಾಯಿತು. ಈ ಪ್ರಕಟಣೆಯಲ್ಲಿ ಪ್ರೀತ್ಯಾದರಗಳಿಂದ ಆಸಕ್ತಿ ವಹಿಸಿದ–ಅದೇ ಪತ್ರಿಕೆಯ ಗೌ॥ ಸಂಪಾದಕರಾದ ಪ್ರೊ. ಎಸ್. ರಾಮಚಂದ್ರಶಾಸ್ತ್ರಿಗಳಿಗೆ ನಾನು ಕೃತಜ್ಞನಾಗಿದ್ದೇನೆ.

ಅನಂತರ ಬಹು ಜನರ ಪ್ರಶಂಸೆಗೆ ಪಾತ್ರವಾದ ಈ ಗಂಥವನ್ನು ಪ್ರತ್ಯೇಕವಾಗಿ ಪುಸ್ತಕರೂಪದಲ್ಲಿ ಪ್ರಕಟಿಸಬೇಕೆಂಬ ಅಪೇಕ್ಷೆ ಚಿಗುರಿತು. ಈ ಚಿಗುರನ್ನು ಪೋಷಿಸಿಬೆಳೆಸಿ ಫಲಿಸುವಂತೆ ಮಾಡಿದವರು ಸಂಮಾನ್ಯರಾದ ಸ್ವಾತಂತ್ರ್ಯಯೋಧರಾದ ಶ್ರೀ. ಮ. ಸು. ಶ್ರೀನಿವಾಸರಾಯರು. ಇವರು ಪರಮ ಆಸ್ತಿಕರೂ ಗುರುದೇವತಾಭಕ್ತರೂ ಆದ ಗಣ್ಯವ್ಯಕ್ತಿಗಳು. ಈ ಮಹನೀಯರ ಪ್ರಭಾವವಲಯ ಬಹು ದೊಡ್ಡದು. ಮುದ್ರಣ ಪ್ರಕಾಶನಗಳ ಎಲ್ಲ ಹೊರೆಯನ್ನು ಅಯಾಚಿತವಾಗಿ ತಾವೇ ಹೊತ್ತು ಈ ಗ್ರಂಥವನ್ನು ಬೆಳಕಿಗೆ ತಂದ ಕೀರ್ತಿ ಶ್ರೀ. ಮ. ಸು. ಶ್ರೀನಿವಾಸರಾಯರಿಗೆ ಸಲ್ಲುತ್ತದೆ. ಶ್ರೀ ಭಗವತ್ಪಾದರ ಮತ್ತು ಶ್ರೀ ತೋಟಕಾಚಾರ್ಯರ ಪಾವನ ಕೃಪಾದೃಷ್ಟಿ ಈ ಮಹನೀಯರ ಮೇಲೆ ಸದಾ ನೆಲೆಸಿರಲೆಂದು ಪ್ರಾರ್ಥಿಸಿಕೊಳ್ಳುತ್ತೇನೆ.

ಕನ್ನಡ ಅನುವಾದವನ್ನು ಅಲ್ಲಲ್ಲಿ ಪರಿಷ್ಕರಿಸಿ ಮುದ್ರಣಾಲಯಕ್ಕೆ ಕಳಿಸಿದ ಮೇಲೆ ಪ್ರೊ॥ ಎಸ್. ರಾಮಚಂದ್ರಶಾಸ್ತ್ರಿಗಳೇ ಶ್ರುತಿಸಾರಸಮುದ್ಧರಣದ ಸಂಸ್ಕೃತ ವ್ಯಾಖ್ಯಾನ ಸಹಿತವಾದ ಎರಡು ಮುದ್ರಿತ ಗ್ರಂಥಗಳನ್ನು ನನ್ನವಲೋಕನಕ್ಕಾಗಿ ಒದಗಿಸಿದರು. ಒಂದು ಪುಣೆಯ ಆನಂದಾಶ್ರಮ ಮುದ್ರಣಾಲಯದಲ್ಲಿ ಕ್ರಿ.ಶ.೧೯೩೬ರಲ್ಲಿ ಅಚ್ಚಾಗಿದೆ. ಇನ್ನೊಂದು ಶ್ರೀರಂಗದ ಶ್ರೀವಾಣೀವಿಲಾಸ ಮುದ್ರಣಾಲಯದಿಂದ ಅಚ್ಚಾಗಿ ಬಂದದ್ದು. ಎರಡರಲ್ಲಿಯೂ ಇರುವ ವ್ಯಾಖ್ಯಾನ ಒಂದೇ. ತತ್ತ್ವದೀಪಿಕಾ ಎಂಬ ಹೆಸರಿನ ಈ ವ್ಯಾಖ್ಯಾನವನ್ನು ಶ್ರೀ ಪೂಜ್ಯಪಾದಯೋಗೀಂದ್ರಶಿಷ್ಯರಾದ ಶ್ರೀಸಚ್ಚಿದಾನಂದಯೋಗಿ ಎಂಬವರು ರಚಿಸಿದ್ದಾರೆ. ಇವರ ದೇಶಕಾಲಗಳು ತಿಳಿದು ಬಂದಿಲ್ಲ. ವ್ಯಾಖ್ಯಾನವು ಪ್ರೌಢವಲ್ಲವಾದರೂ ಮೂಲಶ್ಲೋಕಗಳನ್ನು ಸರಳವಾಗಿ ಸಪ್ರಮಾಣವಾಗಿ ವಿವರಿಸುತ್ತದೆ. 'ಅತಿಮಂದಮುಮುಕ್ಷು'ಗಳಿಗಾಗಿ ಇದನ್ನು ಬರೆದಿರುವುದಾಗಿ ವ್ಯಾಖ್ಯಾನಕಾರರೇ ಹೇಳಿಕೊಂಡಿದ್ದಾರೆ. ಮುದ್ರಣಸಮಯದಲ್ಲಿಯೂ ನನ್ನ ಅನುವಾದದಲ್ಲಿ ಕೆಲವು ಶಬ್ದಗಳನ್ನು ತಿದ್ದುಪಡಿಮಾಡಲು ಈ ವ್ಯಾಖ್ಯಾನದಿಂದ ಉಪಕಾರವಾಗಿದೆ.

ಈ ಗ್ರಂಥವನ್ನು ಅಚ್ಚುಕಟ್ಟಾಗಿ ಸುಂದರವಾಗಿ ಮುದ್ರಿಸಿ ಕೊಟ್ಟಿರುವ ಶ್ರೀನಿವಾಸ ಪ್ರಿಂಟಿಂಗ್ ಪ್ರೆಸ್‌ನ ಮಾಲಿಕರಾದ ಶ್ರೀಯುತ ಸಿ. ರಾಮಸ್ವಾಮಿಯವರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳು ಸಲ್ಲುತ್ತವೆ.

ಬೆಂಗಳೂರು
ಶ್ರೀಮುಖ ಸಂ॥ ವಿಜಯದಶಮೀ
25-10-1993

ವಿದ್ವಾನ್
ಎನ್. ರಂಗನಾಥಶರ್ಮಾ

# ವಿಷಯಾನುಕ್ರಮಣಿಕೆ

ಶ್ರೀ

# ಶ್ರೀತೋಟಕಾಚಾರ್ಯರ ಶ್ರುತಿಸಾರಸಮುದ್ಧರಣಮ್

**ತ್ರೈಲೋಕ್ಯನಾಥ ಹರಿಮೀಡ್ಯಮುದಾರಸತ್ತ್ವಂ**
**ಶಕ್ತೇಸ್ತನೂಜತನಯಂ ಪರಮೇಷ್ಠಿಕಲ್ಪಮ್।**
**ಜೀಮೂತಮುಕ್ತವಿಮಲಾಂಬರಚಾರುವರ್ಣಂ**
**ವಾಸಿಷ್ಠಮುಗ್ರತಪಸಂ ಪ್ರಣತೋಽಸ್ಮಿ ನಿತ್ಯಮ್ ॥ ೧**

ಸ್ತೋತ್ರಾರ್ಹನೂ, ಸತ್ತ್ವಾತಿಶಯಸಂಪನ್ನನೂ, ತ್ರಿಲೋಕೇಶ್ವರನೂ, ಆದ ಶ್ರೀಹರಿಯನ್ನೂ, ಶಕ್ತಿಮುನಿಯ ಪುತ್ರನ ಪುತ್ರನೂ ಬ್ರಹ್ಮದೇವಸಮಾನನೂ ಮೇಘ ನಿರ್ಮುಕ್ತವಾದ ಸ್ವಚ್ಛಗಗನದಂತೆ ಸುಂದರವಾದ ಶ್ಯಾಮಲವರ್ಣನೂ ವಸಿಷ್ಠ ಪುತ್ರನೂ ಮಹಾತಪಸ್ವಿಯೂ ಆದ ವೇದವ್ಯಾಸಮಹರ್ಷಿಯನ್ನೂ ಸದಾ ನಮಸ್ಕರಿಸುತ್ತೇನೆ.

**ವಿವರಣೆ:** – ನಮಸ್ಕಾರರೂಪವಾದ ಮಂಗಳಾಚರಣೆ ಇದು. ವಿಷ್ಣುವನ್ನೂ ವೇದವ್ಯಾಸಮಹರ್ಷಿಗಳನ್ನೂ ನಮಸ್ಕರಿಸಲಾಗಿದೆ. 'ಚ' ಎಂಬ ಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ಈ ರೀತಿ ಅರ್ಥಮಾಡಲಾಗಿದೆ. ' ತ್ರೈಲೋಕ್ಯನಾಥಹರಿ ' ಎಂಬುದನ್ನು ವೇದವ್ಯಾಸರಿಗೆ ವಿಶೇಷಣವಾನ್ನಾಗಿಯೂ ಮಾಡಲು ಶಕ್ಯವಿದೆ. ವ್ಯಾಸರು ವಿಷ್ಣುವಿನ ಅವತಾರವೆಂದು ಪ್ರಸಿದ್ಧಿಯುಂಟು. ಶ್ರೀಮನ್ನಾರಾಯಣನಿಂದ ಆರಂಭವಾಗುವ ಗುರು ಪರಂಪರೆಯೂ ಇಲ್ಲ ಸೂಚಿತವಾಗಿದೆಯೆಂಬುದನ್ನು ಗಮನಿಸಬೇಕು. ಗುರುಪರಂಪರೆ ಹೀಗಿದೆ -

**ನಾರಾಯಣಂ ಪದ್ಮಭುವಂ ವಸಿಷ್ಠಂ ಶಕ್ತಿಂ ಚ ತತ್ಪುತ್ರಪರಾಶರಂ ಚ।**
**ವ್ಯಾಸಂ ಶುಕಂ ಗೌಡಪದಂ ಮಹಾಂತಂ ಗೋವಿಂದ ಯೋಗೀಂದ್ರಮಥಾಸ್ಯಶಿಷ್ಯಮ್॥೧**
**ಶ್ರೀ ಶಂಕರಾಚಾರ್ಯಮಥಾಸ್ಯ ಪದ್ಮಪಾದಂ ಚ ಹಸ್ತಾಮಲಕಂ ಚ ಶಿಷ್ಯಂ।**
**ತಂ ತೋಟಕಂ ವಾರ್ತಿಕಕಾರಮನ್ಯಾನಸ್ಮದ್ಗುರೂನ್ ಸಂತತ ಮಾನತೋಽಸ್ಮಿ॥ ೨**

'ಚ' ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳುವ ಪಕ್ಷದಲ್ಲಿ ಶ್ಲೋಕದ ಮೂರನೆಯ ಸಾಲನ್ನು ಶ್ರೀಹರಿಗೂ ವಿಶೇಷಣವಾಗಿ ತೆಗೆದುಕೊಳ್ಳಬಹುದು.

ಶ್ರೀಮನ್ನಾರಾಯಣನು ಅಪೌರುಷೇಯಗಳಾದ ವೇದಗಳನ್ನು ಮೊದಲು ಬ್ರಹ್ಮನಿಗೆ ಉಪದೇಶಿಸಿದನು. ವೇದವ್ಯಾಸರು ವೇದಾರ್ಥವನ್ನೇ ಬ್ರಹ್ಮಸೂತ್ರವೇ ಮೊದಲಾದ ಪೌರುಷೇಯಗ್ರಂಥಗಳಿಂದ ಮೊದಲು ಪ್ರಚುರಪಡಿಸಿದರು. ಆದ್ದರಿಂದ

ವೇದಾಂತಾಚಾರ್ಯ ಪರಂಪರೆಯಲ್ಲಿ ಇವರೀರ್ವರೂ ಮುಖ್ಯರು. ಶಕ್ತಿಮುನಿಗಳ ಪುತ್ರರು ಪರಾಶರರು, ಅವರ ಪುತ್ರರು ವ್ಯಾಸರು.

ಸಕಲಂ ಮನಸಾ ಕ್ರಿಯಯಾ ಜನಿತಂ
ಸಮವೇಕ್ಷ್ಯ ವಿನಾಶಿತಯಾ ತು ಜಗತ್।
ನಿರವಿದ್ಯತ ಕಶ್ಚಿದತೋ ನಿಖಿಲಾ–
ದವಿನಾಶಿ ಕೃತೇನ ನ ಲಭ್ಯಮಿತಿ॥ ೧

ಕ್ರಿಯೆಯಿಂದ ಹುಟ್ಟಿದ ಸಮಸ್ತವಸ್ತುವೂ ನಶ್ವರವಾದದ್ದು; ಶಾಶ್ವತವಾದ ವಸ್ತುವು ಕ್ರಿಯೆಯಿಂದ ಲಭ್ಯವಲ್ಲ ಎಂಬುದಾಗಿ ಒಬ್ಬ ವಿವೇಕಿ ಪುರುಷನು ಚೆನ್ನಾಗಿ ವಿಚಾರಮಾಡಿ ನಿಖಿಲ ಸಂಸಾರದಿಂದಲೂ ವೈರಾಗ್ಯವನ್ನು ಹೊಂದಿದನು.

**ವಿವರಣೆ** : ಸೇವಾದಿಕ್ರಿಯೆಯಿಂದ ಲಭ್ಯವಾಗುವ ಧನ, ಅಧಿಕಾರಗಳು ಶಾಶ್ವತವಲ್ಲವೆಂದು ಪ್ರತ್ಯಕ್ಷದಿಂದ ಎಲ್ಲರಿಗೂ ಗೊತ್ತಿದೆ. "ಯತ್ಕೃತಕಂ ತದನಿತ್ಯಂ" ಎಂಬ ವ್ಯಾಪ್ತಿಯುಂಟು. ಈ ಲೋಕದಲ್ಲಿ ಸಂಪಾದಿಸತಕ್ಕದ್ದೆಲ್ಲ ಕ್ರಿಯಾಜನ್ಯವಾದ್ದರಿಂದ ಅಶಾಶ್ವತ. ಹಾಗೆಯೇ ಅಗ್ನಿಹೋತ್ರಾದಿ ಪುಣ್ಯಕರ್ಮಗಳಿಂದ ಲಭಿಸುವ ಪರಲೋಕ ಸುಖವೂ ಅಶಾಶ್ವತವೆಂದು ತಿಳಿಯಬೇಕು. "ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ, ಏವಮೇವಾಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ" (ಛಾ. ೮-೧-೬) ಶಾಶ್ವತಸುಖವನ್ನು ಬಯಸುವ ವಿಚಾರಶೀಲನಿಗೆ ಸಂಸಾರದ ಕರ್ಮಮಾರ್ಗದಲ್ಲಿ ವಿರಕ್ತಿ ಹುಟ್ಟುತ್ತದೆ.

**ಟಿಪ್ಪಣಿ:** ವೈರಾಗ್ಯದಿ ಸಾಧನ ಚತುಷ್ಟಯ ಸಂಪನ್ನನು ಈ ಗ್ರಂಥಕ್ಕೆ ಅಧಿಕಾರಿ. ಬ್ರಹ್ಮಾತ್ಮೈಕ್ಯವು ವಿಷಯ. ಮೋಕ್ಷವೆಂಬ ಶಾಶ್ವತಸುಖವು ಪ್ರಯೋಜನ. ಪ್ರಾಪ್ಯ ಪ್ರಾಪಕ ಭಾವವು ಸಂಬಂಧ.

ಪ್ರತಿಪಿತ್ಸುರಸಾವವಿನಾಶಿ ಪದಂ
ಯತಿಧರ್ಮರತೋ ಯತಿಮೇವ ಗುರುಮ್।
ವಿದಿತಾತ್ಮಸತತ್ತ್ವಮುಪೇತ್ಯ ಕವಿಂ
ಪ್ರಣಿಪತ್ಯ ನಿವೇದಿತವಾನ್ ಸ್ವಮತಮ್ ॥ ೨

ಆತನು ನಾಶರಹಿತವಾದ ಶಾಶ್ವತವಸ್ತುವನ್ನು ತಿಳಿಯಲಪೇಕ್ಷಿಸಿ ಸ್ವಯಂ ಸಂನ್ಯಾಸಧರ್ಮದಲ್ಲಿ ನಿರತನಾಗಿ, ಆತ್ಮನ ಯಥಾರ್ಥಸ್ವರೂಪವನ್ನರಿತವನೂ ವಿದ್ವಾಂಸನೂ ಸಂನ್ಯಾಸಿಯೂ ಆದ ಗುರುವಿನ ಬಳಿಗೆ ಹೋಗಿ, ಅಡ್ಡಬಿದ್ದು ನಮಸ್ಕರಿಸಿ, ತನ್ನ ಅಭಿಪ್ರಾಯವನ್ನು ಅರಿಕೆಮಾಡಿಕೊಂಡನು.

**ಟಿಪ್ಪಣಿ:**

ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ
ನಿರ್ವೇದ ಮಾಯನ್ನಾಸ್ತ್ಯ ಕೃತಃ ಕೃತೇನ।
ತದ್ವಿ ಜ್ಞಾನಾರ್ಥಂ ಸ ಗುರು ಮೇವಾಭಿ ಗಚ್ಛೇತ್
ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್॥
(ಮುಂ.ಉ.೧-೨-೧೨)

ಈ ಉಪನಿಷದ್ವಚನದ ಅರ್ಥವೇ ೨-ಽನೆಯ ಶ್ಲೋಕದಲ್ಲಿ ವಿವೃತವಾಗಿದೆ. ಮುಮುಕ್ಷುವಾದವನು ಸಂನ್ಯಾಸಿಯಾಗಬೇಕೆಂದೂ ಆತ್ಮಜ್ಞಾನಿಯು ಸಂನ್ಯಾಸಿಯೇ ಆಗಿರುತ್ತಾನೆಂದೂ ಶ್ರೀಶಂಕರಾಚಾರ್ಯರು ತಮ್ಮ ಭಾಷ್ಯಗಳಲ್ಲಿ ಪ್ರತಿಪಾದಿಸಿದ್ದಾರೆ. ಅದನ್ನು ಮನಸ್ಸಿನಲ್ಲಿಟ್ಟುಕೊಂಡೇ ತೋಟಕಾಚಾರ್ಯರೂ ಸಹ 'ಯತಿಧರ್ಮರತೋ ಯತಿಮೇವ ಗುರುಂ' ಎಂದು ಈ ಶ್ಲೋಕದಲ್ಲಿ ಹೇಳಿದ್ದಾರೆ.

ಭಗವನ್ನುದಧೌ ಮೃತಿಜನ್ಮಜಲೇ
ಸುಖದುಃಖಝುಷೇ ಪತಿತಂ ವ್ಯಥಿತಮ್।
ಕೃಪಯಾ ಶರಣಾಗತಮುದ್ಧರ ಮಾಂ
ಅನುಶಾಧ್ಯುಪಸನ್ನಮನನ್ಯಗತಿಮ್ ॥ ೪

ಆತನು ಗುರುವಿಗೆ ನಿವೇದಿಸಿಕೊಂಡಿದ್ದೇನೆಂದರೆ :'ಹೇ ಭಗವನ್, ಜನ್ಮ ಮರಣಗಳೆಂಬ ಜಲದಿಂದಲೂ, ಸುಖದುಃಖಗಳೆಂಬ ತಿಮಿಂಗಿಲಗಳಿಂದಲೂ ತುಂಬಿದ ಸಂಸಾರಸಾಗರದಲ್ಲಿ ನಾನು ಬಿದ್ದು ವ್ಯಥೆಪಡುತ್ತಿದ್ದೇನೆ. ಅದಕ್ಕಾಗಿ ನಾನೀಗ ಶರಣಾಗತನಾಗಿ ಬಂದಿದ್ದೇನೆ. ನನಗೆ ಬೇರೆ ಗತಿ ಯಾವುದೂ ಇಲ್ಲ. ನನಗೆ ಶ್ರೇಯಸ್ಸು ಹೇಗೆಂಬುದನ್ನು ಕಾರುಣ್ಯದಿಂದ ಉಪದೇಶಿಸಬೇಕು'. ಆಗ ಗುರುವು ಹೀಗೆ ಹೇಳಿದನು:-

ವಿನಿವರ್ತ್ಯ ರತಿಂ ವಿಷಯೇ ವಿಷಮಾಂ
ಪರಿಮುಚ್ಯ ಶರೀರನಿಬದ್ಧಮತಿಮ್।
ಪರಮಾತ್ಮಪದೇ ಭವ ನಿತ್ಯರತೋ
ಜಹಿ ಮೋಹಮಯಂ ಭ್ರಮಮಾತ್ಮಮತೇಃ ॥ ೫

ಶಬ್ದಸ್ಪರ್ಶಾದಿ ವಿಷಯಸುಖದ ಕಡೆಗೆ ಧಾವಿಸುತ್ತ ಕೆಟ್ಟ ಪರಿಣಾಮವನ್ನು ಕೊಡತಕ್ಕ ವಿಷಯಾಸಕ್ತಿಯನ್ನು ಪರಿತ್ಯಜಿಸು. ಶರೀರಕ್ಕೆ ಅಂಟಿಕೊಂಡಿರುವ -ಆತ್ಮವೆಂಬ

ಅಹಂಕಾರವನ್ನು ದೂರಮಾಡು. ಸದಾ ಪರಮಾತ್ಮನ ಧ್ಯಾನದಲ್ಲಿ ನಿರತನಾಗಿರು. ಅವಿದ್ಯಾಜನ್ಯವಾದ ಶರೀರವೇ ನಾನೆಂಬ ಬುದ್ಧಿಯನ್ನು ತೊರೆದುಬಿಡು.

**ತಾತ್ಪರ್ಯ** :– ವಿಷಯಸುಖದ ಅಭಿಲಾಷೆ ಮಾನವನನ್ನು ಆತ್ಮಚಿಂತನೆಯಿಂದ ದೂರಮಾಡುವುದು. ಮತ್ತೆ ಮತ್ತೆ ಜನ್ಮಾಂತರಗಳಿಗೂ ಕಾರಣವಾಗುವುದರಿಂದ ವಿಷಮವಾದದ್ದು. ಶರೀರವೇ ನಾನೆಂಬುದು ಭ್ರಮೆ. ಶರೀರಕ್ಕಿಂತ ಆತ್ಮನು ಬೇರೆಯೆಂಬ ಜ್ಞಾನ ಸಾಧಕನಿಗೆ ಅತ್ಯಾವಶ್ಯಕ.

**ಶರೀರವು ಆತ್ಮನಲ್ಲ:–**

**ವಿಸೃಜಾನ್ನಮಯಾದಿಷು ಪಂಚಸು ತಾಂ**
**ಅಹಮಸ್ಮಿ ಮಮೇತಿ ಮತಿಂ ಸತತಮ್ ।**
**ದೃಶಿರೂಪಮನಂತಮೃತಂ ವಿಗುಣಂ**
**ಹೃದಯಸ್ಥಮವೇಹಿ ಸದಾಹಮಿತಿ ॥** ೬

ಅನ್ನಮಯಾದಿ ಪಂಚಕೋಶಗಳಲ್ಲಿಯ 'ನಾನು' 'ನನ್ನದು' ಎಂಬ ಬುದ್ಧಿಯನ್ನು ಸರ್ವಥಾ ತ್ಯಜಿಸಿಬಿಡು, ಅದಕ್ಕೆ ಪ್ರತಿಯಾಗಿ ಹೃದಯದಲ್ಲಿ ನೆಲೆಸಿರುವ ದೃಗ್‌ರೂಪವೂ ಅನಂತವೂ ಸತ್ಯವೂ ನಿರ್ಗುಣವೂ ಆದ ಆತ್ಮವಸ್ತುವೇ ನಾನು ಎಂಬುದಾಗಿ ಸದಾ ತಿಳಿದಿರು.

**ಟಿಪ್ಪಣಿ:**– ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ–ಎಂಬ ಪಂಚಕೋಶಗಳ ವಿಚಾರ ತೈತ್ತಿರೀಯೋಪನಿಷತ್ತಿನಲ್ಲಿ ಬಂದಿದೆ. ಆತ್ಮನು ದೃಕ್–ಎಂದರೆ ನೋಡತಕ್ಕವನು, ನೋಡಿಸಿಕೊಳ್ಳತಕ್ಕವನಲ್ಲ. ಋತ = ಸತ್ಯ.

ಆತ್ಮನು ಉಪಾಧಿಯಿಂದ ಬಹುವಾಗಿ ಕಾಣಿಸುತ್ತಾನೆ :–

**ಜಲಭೇದಕೃತಾ ಬಹುತೇವ ರವೇ–**
**ರ್ಘಟಿಕಾದಿಕೃತಾ ನಭಸೋಽಪಿ ಯಥಾ ।**
**ಮತಿಭೇದಕೃತಾ ತು ತಥಾ ಬಹುತಾ**
**ತವ ಬುದ್ಧಿದೃಶೋಽವಿಕೃತಸ್ಯ ಸದಾ ॥** ೭

ಬೇರೆ ಬೇರೆ ನೀರಿನಲ್ಲಿ ಪ್ರತಿಬಿಂಬಿಸುವ ಸೂರ್ಯನೂ ಗಡಿಗೆ ಮೊದಲಾದ ನಿಮಿತ್ತಗಳಿಂದ ಆಕಾಶವೂ ಬಹಳ ಇದ್ದಂತೆ ಕಾಣುತ್ತವೆ. ಹಾಗೆಯೇ ಬುದ್ಧಿಸಾಕ್ಷಿಯೂ

ಸದಾವಿಕಾರರಹಿತನೂ ಆದ ಆತ್ಮನು ಬುದ್ಧಿಭೇದದಿಂದ ಬಹುವಾಗಿ ಇರುವಂತೆ ನಿನಗೆ ತೋರುತ್ತದೆ.

**ವಿವರಣೆ ;**– ಒಬ್ಬನೇ ಸೂರ್ಯ, ಒಂದೇ ಆಕಾಶ ಬೇರೆ ಬೇರೆ ಜಲಪಾತ್ರೆಗಳಲ್ಲಿ ಮತ್ತು ಸರಸ್ಸುಗಳಲ್ಲಿ ಪ್ರತಿಬಿಂಬಿಸಿದಾಗ ಒಬ್ಬಸೂರ್ಯನೇ ಹಲವಾರು ಸೂರ್ಯರಂತೆ ಕಾಣಿಸಿಕೊಳ್ಳುತ್ತಾನೆ. ಇದಕ್ಕೆ ಜಲವೆಂಬ ಉಪಾಧಿ ಕಾರಣ. ಘಟಾಕಾಶ, ಮಠಾಕಾಶ –ಮುಂತಾದ ವ್ಯವಹಾರಗಳಿದ್ದರೂ ಆಕಾಶ ಒಂದೇ ಎಂಬುದು ನಿಶ್ಚಿತ. ಇಲ್ಲಿ ಘಟಾದಿಗಳು ಉಪಾಧಿಗಳು, ಹಾಗೆ ಒಬ್ಬನೇ ಆತ್ಮನು ಬೇರೆ ಬೇರೆ ಜನರ ಬುದ್ಧಿಗಳಲ್ಲಿ ಪ್ರತಿಬಿಂಬಿಸುವದರಿಂದ ಹಲವಾರು ಅತ್ಮರಿರುವಂತೆ ತೋರಿಬರುತ್ತದೆ. ಇದಕ್ಕೆ ಅನಂತಬುದ್ಧಿಗಳೇ–ಎಂದರೆ ಅಂತಃಕರಣಗಳೇ–ಉಪಾಧಿಗಳು. 'ಏಕೋದೇವಃ ಸರ್ವಭೂತೇಷು ಗೂಢಃ' (ಶ್ವೇತಾ. ೬–೧೧), 'ಏಕಧಾ ಬಹುಧಾ ಚೈವ ದೃಶ್ಯತೇಜಲ ಚಂದ್ರವತ್' (ಬ್ರಹ್ಮಬಿಂದು–೧೨) ,'ಏಕಮೇವಾದ್ವಿತೀಯಂ ಬ್ರಹ್ಮ' (ಛಾಂ) ಮುಂತಾದ ಶ್ರುತಿಗಳು ಆತ್ಮನೊಬ್ಬನೇ ಎಂದು ಹೇಳುತ್ತವೆ. ಬುದ್ಧಿಯಲ್ಲಿ ಆತನು ಪ್ರತಿಬಿಂಬಿತನಾದಾಗ ಜೀವ ಎಂಬ ವ್ಯವಹಾರ ಬರುತ್ತದೆ. ಆತ್ಮನಾದರೋ ಬುದ್ಧಿಗೂ ಸಾಕ್ಷಿಯಾದವನು.

**ದಿನಕೃತ್‌ಪ್ರಭಯಾ ಸದೃಶೇನ ಸದಾ**
**ಜನಚಿತ್ತಗತಂ ಸಕಲಂ ಸ್ವಚಿತಾ ।**
**ವಿದಿತಂ ಭವತಾವಿಕೃತೇನ ಸದಾ**
**ಯತ ಏಮತೋಽಸಿತ ಏವ ಸದಾ ॥ ೮**

ಎಲೈ ಮಾನವ, ಸೂರ್ಯಪ್ರಭೆಗೆ ಸದೃಶನಾದ ನಿನ್ನಿಂದ ಚಿತ್ತಗತವಾದ ಸಕಲ ವೃತ್ತಿಜ್ಞಾನವೂ ಆತ್ಮಚೈತನ್ಯದಿಂದ ವಿದಿತವಾಗುತ್ತದೆ. ನೀನು ಸದಾ ಅವಿಕಾರಿ, ಆದ್ದರಿಂದ ಎಂದೂ ಬದ್ಧನಾಗಿಯೇ ಇಲ್ಲ.

**ವಿವರಣೆ :**–ಆತ್ಮನು ಬುದ್ಧಿಸಾಕ್ಷಿ. ಘಟಪಟಾದಿ ಜ್ಞಾನಗಳು ಬುದ್ಧಿಯ ವೃತ್ತಿಗಳು.ಅವುಗಳನ್ನು ತಿಳಿಯಯತಕ್ಕದ್ದು ಆತ್ಮಚೈತನ್ಯವೇ, ಆತ್ಮನು ಸೂರ್ಯನಿದ್ದಂತೆ. ಜೀವನು ಸೂರ್ಯನ ಪ್ರಭೆ ಇದ್ದಂತೆ. ಸೂರ್ಯಪ್ರಭೆಯು ವಸ್ತುಗಳನ್ನು ಬೆಳಗಿಸುತ್ತದೆ. ಸೂರ್ಯನಾಗಲಿ ಅವನ ಪ್ರಭೆಯಾಗಲಿ ಯಾವ ವಿಕಾರವನ್ನೂ ಹೊಂದುವುದಿಲ್ಲ. ಸೂರ್ಯನಿಗೂ ಪ್ರಭೆಗೂ ವಾಸ್ತವವಾದ ಭೇದವೂ ಇಲ್ಲ. ಬುದ್ಧಿವೃತ್ತಿಯನ್ನರಿಯುವ ಆತ್ಮನು ಬುದ್ಧಿಸಾಕ್ಷಿ. ಬುದ್ದಿಯು ಮಾತ್ರ ಘಟಾದಿವಿಷಯವನ್ನರಿಯುವಾಗ ವಿಕಾರ ಹೊಂದುತ್ತದೆ. ಈ ವಿಚಾರವೇ ಮುಂದಿನ ಮೂರು ಶ್ಲೋಕಗಳಲ್ಲಿ ಸ್ಪಷ್ಟೀಕೃತವಾಗಿದೆ.

**ಟಿಪ್ಪಣಿ :**–' ಸದೃಶೇನ ' ಎಂಬ ಶಬ್ದಕ್ಕೆ 'ಭವತಾ' ಎಂಬುದರೊಡನೆ ಅನ್ವಯ. ಜನ-ಎಂದು ಸಂಬೋಧನೆ, ಅಸಿತ ಅಬದ್ಧ, ಬದ್ಧನಲ್ಲದವನು, ಮುಕ್ತ. **ಷಿಞ್**–ಬಂಧನೇ ಎಂಬ ಧಾತುವಿನ ಮೇಲೆ ಕ್ತ ಪ್ರತ್ಯಯ ಬಂದು ಸಿತ ಶಬ್ದವಾಗಿದೆ. ಸಿತ - ಬದ್ಧ.

**ಉಪರಾಗಮುಪೇತ್ಯ ಮತಿರ್ವಿಷಯೈ–**
**ರ್ವಿಷಯಾವಧೃತಂ ಕುರುತೇ ತು ಯತಃ ।**
**ತತ ಏವ ಮತೇರ್ವಿದಿತಾವದಿತಾಃ**
**ವಿಷಯಾಸ್ತು, ತತಃ ಪರಿಣಾಮವತೀ ॥** ೯

ಬುದ್ಧಿಯು ವಿಷಯಗಳೊಡನೆ ಉಪರಾಗವನ್ನು ಹೊಂದಿ–ಎಂದರೆ ವಿಷಯಾಕಾರವನ್ನು ಪಡೆದು ಘಟಾದಿವಿಷಯಗಳನ್ನು ಗ್ರಹಿಸುತ್ತದೆ. ಆದ್ದರಿಂದ ಬುದ್ಧಿಗೆ ವಿಷಯಗಳು ಜ್ಞಾತಗಳೂ (ವಿಷಯಾಕಾರವನ್ನು ಬುದ್ಧಿಯು ಪಡೆಯದಾಗ) ಅಜ್ಞಾತಗಳೂ ಆಗುತ್ತವೆ. ಆದ್ದರಿಂದ ಬುದ್ಧಿಯು ಪರಿಣಾಮ ಹೊಂದತಕ್ಕದ್ದು–ವಿಕಾರಿ ಎಂದು ಸಿದ್ಧವಾಗುತ್ತದೆ.

**ವಿವರಣೆ :**–ಘಟಜ್ಞಾನವೆಂದರೆ ಬುದ್ಧಿಯು ಘಟಾಕಾರವಾಗಿ ಪರಿಣಮಿಸುವುದೆಂದು ಅರ್ಥ. ವಸ್ತುವಿನ ಆಕಾರವನ್ನು ಬುದ್ಧಿಯು ತಳೆಯವುದೇ ವಸ್ತುವಿನ ಜ್ಞಾನ ಎಂದು ವೇದಾಂತದ ಪ್ರಕ್ರಿಯೆ. ಈ ಬುದ್ಧಿಪರಿಣಾಮಕ್ಕೆ ಬುದ್ಧಿವೃತ್ತಿಯೆಂದು ಹೆಸರು. ಬೇರೆ ಬೇರೆ ರೂಪವನ್ನು ತಳೆಯುವುದರಿಂದ ಬುದ್ಧಿಯು ವಿಕಾರಿ ಎಂದು ಹೇಳಲಾಗಿದೆ. ಹೀಗೆ ಬುದ್ಧಿಯು ವಿಕಾರವನ್ನು ಹೊಂದಿದಾಗ ಘಟವು ವಿದಿತವಾಯಿತು ಎಂದೂ ವಿಕಾರವನ್ನು ಹೊಂದದಾಗ ಘಟವು ಅವಿದಿತವೆಂದೂ ವ್ಯವಹಾರ ಬರುತ್ತದೆ.

**ಬುದ್ಧಿಸಾಕ್ಷಿಯಾದ ಆತ್ಮನು ನಿರ್ವಿಕಾರ ;–**
**ಮತಿವೃತ್ತಯ ಆತ್ಮಚಿತಾ ವಿದಿತಾಃ**
**ಸತತಂ ಹಿ ಯತೋಽವಿಕೃತಸ್ತು ತತಃ ।**
**ಯದಿ ಚಾತ್ಮಚಿತಿಃ ಪರಿಣಾಮವತೀ**
**ಮತಯೋ ವಿದಿತಾವಿದಿತಾಃ ಸ್ಯುರಿಮಾಃ ॥** ೧೦

ಬುದ್ಧಿವೃತ್ತಿಗಳಾದರೋ ಆತ್ಮಚೈತನ್ಯದಿಂದ ಸರ್ವದಾ ವಿದಿತಗಳೇ ಆಗಿರುತ್ತವೆ ಆದ್ದರಿಂದಲೇ ಆತ್ಮನು ನಿರ್ವಿಕಾರನೆಂದು ಸಿದ್ಧವಾಗುತ್ತದೆ. ಆತ್ಮಚೈತನ್ಯವೂ(ಬುದ್ಧಿಯಂತೆ) ಪರಿಣಾಮವುಳ್ಳದ್ದಾಗಿದ್ದರೆ ಬುದ್ಧಿವೃತ್ತಿಗಳೂ ಸಹ(ಘಟಾದಿವಿಷಯಗಳಂತೆ) ವಿದಿತಗಳೂ ಕದಾಚಿತ್ ಅವಿದಿತಗಳೂ ಆಗಬೇಕಾದೀತು.

ಚರಿತಂ ತು ಧಿಯಃ ಸಕಲಂ ಸತತಂ
ವಿದಿತಂ ಭವತಾ ಪರಿಶುದ್ಧಚಿತಾ ।
ಮತಿಭೇದಗುಣೋ ನ ಹಿ ತೇಽಸ್ತಿ ತತೋ
ಯತ ಏವಮತೋಽಸದೃಶಸ್ತು ಧಿಯಾ ॥ ೧೧

ಪರಿಶುದ್ಧ ಚಿದಾತ್ಮಕನಾದ ನೀನು ಬುದ್ಧಿಯ ಸಕಲವೃತ್ತಿಯನ್ನು ಸದಾ ತಿಳಿಯುತ್ತಲೇ ಇದ್ದೀಯೆ. ಆದ್ದರಿಂದ ಬುದ್ಧಿವೃತ್ತಿಯಿಂದ ತೋರುವ ಸುಖದುಃಖಾದಿ ಗುಣಭೇದವು ನಿನ್ನಲ್ಲಿಲ್ಲ. ಆದಕಾರಣದಿಂದಲೇ ಬುದ್ಧಿಗಿಂತ ವಿಲಕ್ಷಣನಾದವನು ನೀನು.

**ವಿವರಣೆ** :–ಬುದ್ಧಿವೃತ್ತಿಗೆ ನೀನು ಸಾಕ್ಷಿ. ಬುದ್ಧಿವೃತ್ತಿಯು ದೃಶ್ಯ, ನೀನು ದೃಕ್. ದೃಕ್ ಯಾವಾಗಲೂ ದೃಶ್ಯವಲ್ಲ. ಏವಂಚ ಬುದ್ಧಿಯಲ್ಲಿರುವ ಸುಖದುಃಖಾದಿ ಧರ್ಮಗಳಾವುವೂ ನಿನ್ನಲ್ಲಿಲ್ಲ. ನೀನು ಪರಿಶುದ್ಧ ಚೈತನ್ಯನಾಗಿದ್ದೀಯೆ. ಬುದ್ಧಿಯು ದೃಶ್ಯವೂ ಪರಿಣಾಮಿಯೂ ಅನೇಕವೂ ಆಗಿದೆ, ನೀನು ಅದಕ್ಕೆ ವಿಲಕ್ಷಣನಾಗಿ ದೃಕ್, ಪರಿಣಾಮರಹಿತ ಮತ್ತು ಏಕನಾಗಿದ್ದೀಯೆ.

ವಿದಿತತ್ವಮವಿಪ್ರತಿಪನ್ನತಯಾ
ಮತಿಷು ಪ್ರಗತಂ ವಿಷಯೇಷು ಯಥಾ ।
ಯತ ಏವಮತಃ ಪರಸಂವಿದಿತಾ
ವಿದಿತತ್ವತ ಏವ ಯಥಾ ವಿಷಯಾಃ ॥ ೧೨

ಘಟಾದಿ ವಿಷಯಗಳು ಜ್ಞಾತವಾಗುತ್ತವೆ–ಅವುಗಳಲ್ಲಿ ದೃಶ್ಯತ್ವ ಇದೆ–ಎನ್ನುವುದು ಯಾವ ಶಂಕೆಯೂ ಇಲ್ಲದೆ ನಿಶ್ಚಿತವಾಗಿದೆ. ಅದೇರೀತಿಯಲ್ಲಿ ಬುದ್ಧಿವೃತ್ತಿಗಳೂ ದೃಶ್ಯಗಳೆಂದು ಸಿದ್ಧವಾಗುತ್ತವೆ. ಆದ್ದರಿಂದ ಬುದ್ಧಿಯು ಪರಪ್ರಕಾಶ್ಯ, ಏಕೆಂದರೆ ವಿಷಯಗಳಂತೆ ಅದೂ ದೃಶ್ಯವಾದದ್ದು.

ಪರಸಂವಿದಿತಾಃ ಸತತಂ ಹಿ ಯತೋ
ನ ವಿದುಃ ಸ್ವಮಮೀ ವಿಷಯಾಸ್ತು ತತಃ ।
ಮತಯೋಽಪಿ ತಥಾ ಪರಸಂವಿದಿತಾಃ
ನ ವಿದುಃ ಸ್ವಮಮೂರ್ವಿಷಯಾಸ್ತು ಯಥಾ ॥ ೧೩

ಘಟಾದಿವಿಷಯಗಳು ತಮಗಿಂತಭಿನ್ನವಾದ ಬುದ್ಧಿಯಿಂದ ವಿದಿತವಾಗತಕ್ಕವು. ಆದ್ದರಿಂದಲೇ ಅವು ತಮ್ಮನ್ನು ತಾವೇ ತಿಳಿದುಕೊಳ್ಳಲಾರವು, ಅದೇ ಪ್ರಕಾರ ಬುದ್ಧಿವೃತ್ತಿಗಳೂ ತಮಗಿಂತ ಭಿನ್ನವಾದ ಆತ್ಮಚೈತನ್ಯದಿಂದ, ವಿಷಯಗಳಂತೆಯೇ ವಿದಿತವಾಗುತ್ತವೆಯಾದ್ದರಿಂದ, ತಮ್ಮನ್ನು ತಾವೇ ತಿಳಿದುಕೊಳ್ಳಲಾರವು.

**ಆದ್ದರಿಂದ ಘಟಾದಿಗಳಂತೆ ಬುದ್ಧಿಯೂ ಜಡವೆಂದು ತಾತ್ಪರ್ಯ :–**

**ವಿಷಯಾಕೃತಿಸಂಸ್ಥಿತಿರೇಕವಿಧಾ**
**ಮನಸಸ್ತು ಸದಾ ವ್ಯವಹಾರವಿಧೌ ।**
**ಅಹಮಿತ್ಯಪಿ ತದ್ವಿಷಯಾ ತ್ವಪರಾ**
**ಮತಿವೃತ್ತಿರವಜ್ವಲಿತಾತ್ಮಚಿತಾ ॥** ೧೪

ಲೋಕವ್ಯವಹಾರವನ್ನು ನಡೆಸುವಾಗ ಮನೋವೃತ್ತಿಯು ಎರಡು ವಿಧವಾಗಿರುತ್ತದೆ. ಘಟಾದಿವಿಷಯಗಳನ್ನು ನೋಡಿದಾಗ ವಿಷಯಾಕಾರವನ್ನು ತಳೆಯುವುದು ಒಂದುವಿಧ. ಇನ್ನು ಆತ್ಮಚೈತನ್ಯದಿಂದ ಪ್ರಕಾಶಿತವಾಗಿ ಅದರೊಡನೆ ತಾದಾತ್ಮ್ಯವನ್ನು ಹೊಂದಿ ಘಟಾದಿ ವಿಷಯವನ್ನು ನೋಡುವಾಗ 'ಅಹಂ–ನಾನು' ಎಂಬ ಅಹಮಾಕಾರವನ್ನು ತಳೆಯುವುದು ಇನ್ನೊಂದು ವಿಧ.

**ವಿವರಣೆ** :–ಬುದ್ಧಿ, ಮನಸ್ಸು, ಅಂತಃಕರಣ–ಇವೆಲ್ಲಾ ಪ್ರಕೃತದಲ್ಲಿ ಒಂದೇ ಎಂದು ತಿಳಿಯಬೇಕು. ಮನೋವೃತ್ತಿ, ಬುದ್ಧಿವೃತ್ತಿ–ಎಂದರೆ ಒಂದೇ ಅರ್ಥ. ಅಹಂ, ಅಹಂ–ಎಂದುಕೊಳ್ಳತಕ್ಕದ್ದು ಮನಸ್ಸೇ. ಆತ್ಮನೊಡನೆ ತಾದಾತ್ಮ್ಯವನ್ನು ಹೊಂದಿ ಹಾಗೆಂದುಕೊಳ್ಳುತ್ತದೆ. ಇದೇ ಅಹಂಕಾರ ಎಂಬ ಅಂತಃಕರಣವೃತ್ತಿ. ಸುಖದುಃಖಾದಿಗಳು 'ಅಹಂ' ಎಂದುಕೊಳ್ಳುವ ಮನಸ್ಸಿಗೇ ಹೊರತು ಆತ್ಮನಿಗಲ್ಲ.

**ಕರ್ತೃತ್ವಾದಿಗುಣಗಳು ಆತ್ಮನಲ್ಲಿ ಅಧ್ಯಸ್ತವಾಗಿವೆ:–**

**ಪುರುಷಸ್ಯ ತು ಧರ್ಮವದುದ್ಭವತಿ**
**ಸ್ವರಸೇನ ಮತೇಃ ಸ್ವಗುಣೋಽಪಿ ಯತಃ ।**
**ಅತ ಆತ್ಮಗುಣಂ ಪ್ರತಿಯಂತಿ ಜನಾಃ**
**ಮತಿವೃತ್ತಿಮಿಮಾಮಹಮಿತ್ಯಬುಧಾಃ॥** ೧೫

'ಅಹಂ' ಇತ್ಯಾದಿ ಧರ್ಮವು ತಾತ್ತ್ವಿಕವಾಗಿ ಬುದ್ಧಿವೃತ್ತಿಯಾಗಿದ್ದು ಬುದ್ಧಿಯ ಗುಣವಾಗಿದ್ದರೂ ಇದು ಆತ್ಮನ ಧರ್ಮವೋ ಎಂಬಂತೆ ಕಾಣಿಸಿಕೊಳ್ಳುತ್ತದ್ದೆ. ಆದ್ಧರಿಂದ ಅಜ್ಞಾನಿಗಳಾದ ಜನರು ಬುದ್ಧಿಗುಣವನ್ನು ಆತ್ಮಗುಣವೆಂದು ತಿಳಿದುಕೊಂಡುಬಿಟ್ಟಿದ್ದಾರೆ.

**ವಿವರಣೆ** :–ಕಾದ ಕಬ್ಬಿಣವು ಸುಡುತ್ತದೆ ಎಂಬ ವ್ಯವಹಾರ ಉಂಟು. ವಾಸ್ತವವಾಗಿ ಸುಡತಕ್ಕದ್ದು ಕಬ್ಬಿಣವಲ್ಲ, ಕಬ್ಬಿಣದಲ್ಲಿರುವ ಅಗ್ನಿ–ಎಂದು ವಿಚಾರ

ಮಾಡಿದರೆ ಗೊತ್ತಾಗುತ್ತದೆ. ಕಬ್ಬಿಣ-ಅಗ್ನಿ ಇವುಗಳ ತಾದಾತ್ಮ್ಯದಿಂದ ಈ ರೀತಿ ವ್ಯವಹಾರ ಹುಟ್ಟಿದೆ. ಹಾಗೆಯೇ ಬುದ್ಧಿ-ಆತ್ಮ ಇವುಗಳಿಗೆ ಅಜ್ಞಾನದಿಂದ ನಾವು ಅಭೇದವನ್ನು ಕಲ್ಪಿಸಿಕೊಂಡಿದ್ದೇವೆ. ಈ ಅಜ್ಞಾನವೇ ಅಧ್ಯಾಸವೆನಿಸುತ್ತದೆ. ಇದು ಒಂದು ಭ್ರಮೆ. ಆತ್ಮನನ್ನೇ 'ಅಹಂ' ಎಂದು ತಿಳಿದಾಗ ಕರ್ತೃತ್ವಾದಿಗಳು ಆತ್ಮನಲ್ಲಿವೆಯೆಂಬ ಭ್ರಮೆ ಸಹಜ. ಸಾಮಾನ್ಯಜನರು ಮಾತ್ರವಲ್ಲ, ನೈಯಾಯಿಕರೇ ಮೊದಲಾದ ಶಾಸ್ತ್ರಜ್ಞರೂ ಸಹ ಈ ಭ್ರಮೆಯಿಂದ ಹೊರತಾಗಿಲ್ಲ. ಸುಖದುಃಖಾದಿಗಳು ಆತ್ಮಗುಣಗಳೆಂದು ಅವರು ಹೇಳುತ್ತಾರೆ. ಆತ್ಮನು ನಿರ್ಗುಣ ಎಂದು ವೇದಾಂತಿಗಳ ಸಿದ್ಧಾಂತ.

**ಯದಿ ಸಾ ನ ಭವೇಜ್ಜನಮೋಹಕರೀ**
**ವ್ಯವಹಾರಮಿಮಂ ನ ಜನೋಽನುಭವೇತ್ ।**
**ವಿಫಲಶ್ಚ ಸದಾ ವಿಷಯಾನುಭವೋ**
**ಜ್ಞಗುಣೋ ನ ಹಿ ಸೇತಿ ಯದಾ ವಿದಿತಾ ॥** ೧೬

ಜನರನ್ನು ಮೋಹಗೊಳಿಸತಕ್ಕ ಅಂತಹ ಅಹಂಕಾರವೃತ್ತಿಯು ಬುದ್ಧಿಗೆ ಉಂಟಾಗದೆ ಹೋಗಿದ್ದರೆ, ಜನರಿಗೆ ' ನಾನು ಕರ್ತ, ನಾನು ಭೋಕ್ತ ' ಇತ್ಯಾದಿ ವ್ಯವಹಾರವು ಬರುತ್ತಲೇ ಇರಲಿಲ್ಲ. ಅಹಂಭಾವವು ಆತ್ಮಗುಣವಲ್ಲವೆಂದು ನಿಶ್ಚಿತವಾಗಿ ತಿಳಿದರೆ, ಈ ವಿಷಯಭೋಗವೂ ವ್ಯರ್ಥವಾಗುತ್ತದೆ.

**ವಿವರಣೆ** :-ಲೋಕದಲ್ಲಿ ಸರ್ವರೂ ಅಹಂಭಾವನೆಯಿಂದಲೇ ಕಾರ್ಯದಲ್ಲಿ ತೊಡಗುತ್ತಾರೆ. ನಾನು ಕರ್ತನಲ್ಲ, ಭೋಕ್ತನಲ್ಲ ಎಂಬ ನಿಶ್ಚಯವಿದ್ದರೆ ವ್ಯವಹಾರ ನಡೆಯುವುದೇ ಇಲ್ಲ. ಅಹಂಕಾರದಿಂದ ಮಮಕಾರ ಹುಟ್ಟುತ್ತದೆ. ಇವೆರಡರಿಂದ ಪ್ರವೃತ್ತಿಮಾರ್ಗ ನಡೆಯತ್ತದೆ. ವಿಷಯಭೋಗದಿಂದ ಜನ್ಯವಾದ ಸುಖವು ನನಗಲ್ಲ-ಎಂದು ತಿಳಿದಿದ್ದರೆ ವಿಷಯ ಭೋಗವು ವ್ಯರ್ಥವಾಗುತ್ತದೆ. ಯಾರೂ ಅದರಲ್ಲಿ ಪ್ರವರ್ತಿಸುವುದಿಲ್ಲ.

**ಉಪಲಭ್ಯಘಟಾದಿನಿಭೈವ ಭವೇತ್**
**ಮನಸೋ ಯದಿ ಸಂಸ್ಥಿತಿರೇಕವಿಧಾ ।**
**ಪುರುಷಸ್ಯ ಚಿತಿಶ್ಚ ನ ವಿಕ್ರಿಯತೇ**
**ಮತಿವೃತ್ತಿಮಪೇಕ್ಷ್ಯ ಘಟಾದಿನಿಭಾಮ್ ॥** ೧೭

ಮನಸ್ಸಿಗೆ ಏಕವಿಧವಾದ ವೃತ್ತಿಯು ಮಾತ್ರ ಇದೆಯೆಂದೂ (ಅಹಮಾಕಾರ ವೃತ್ತಿ ಇಲ್ಲವೆಂದೂ ಹೇಳುವುದಾದರೆ) ಆಗ ಮನಸ್ಸು ಜ್ಞೇಯವಾದ ಘಟಾದಿಯ ಆಕಾರವನ್ನು ಮಾತ್ರ ತಳೆಯತ್ತದೆ ಎನ್ನಬೇಕಾಗುತ್ತದೆ. ಆ ಪಕ್ಷದಲ್ಲಿ ' ಅಹಂ '

ಎಂಬ ಅಭಿಮಾನ ಯಾರಿಗೆ ? ಆತ್ಮಚೈತನ್ಯವಾದರೋ ಎಂದೂ ವಿಕಾರ ಹೊಂದುವುದಿಲ್ಲ. ಘಟಾದಿರೂಪವನ್ನು ತಳೆಯವ ಬುದ್ಧಿವೃತ್ತಿಯಂತೆ ಅದು ವಿಕೃತವಾಗುವದಿಲ್ಲ.

**ವಿವರಣೆ** :-ಬುದ್ಧಿಗೆ ಎರಡು ವಿಧವಾದ ವೃತ್ತಿಯುಂಟೆಂದು ಹಿಂದೆ ಹೇಳಿದೆ. ವಿಷಯಾಕಾರವೃತ್ತಿಯಿಲ್ಲದಿದ್ದರೆ ಘಟಾದಿವಿಷಯವು ಜ್ಞಾತವಾಗುವುದಿಲ್ಲ. ಅಹಮಾಕಾರ ವೃತ್ತಿಯಿಲ್ಲದಿದ್ದರೆ ನಾನು ಎಂಬ ವ್ಯವಹಾರ ನಡೆಯವುದಿಲ್ಲ. ಆತ್ಮನು ನಿರ್ವಿಕಾರನಾದ್ದರಿಂದ ಅವನಲ್ಲಿ ಅಹಂಮಾಕಾರವೃತ್ತಿ ಹುಟ್ಟುವುದಿಲ್ಲ. ಆದ್ದರಿಂದ ಬುದ್ಧಿಗೆ ಅಧ್ಯಾಸದಿಂದ ಅಹಮಾಕಾರ ವೃತ್ತಿಯೂ ಇದೆಯೆಂದು ತಿಳಿಯಬೇಕು.

**ಅವಗಂತ್ರವಗಮ್ಯ ಚಿದಾತ್ಮಧಿಯೋ-**
**ರಹಮಿತ್ಯಭಿಮಾನವಿಹೀನತಯಾ ।**
**ಸ್ಥಿತಯೋರಭಿಮಾನಪುರಃಸರಕಂ**
**ವ್ಯವಹಾರಪಥಂ ನ ಜನೋಽವತರೇತ್ ॥** ೧೮

ಚಿದಾತ್ಮನು ಅವಗಂತೃ-ಸಾಕ್ಷಿ. ಬುದ್ಧಿಯು ಅವಗಮ್ಯ-ದೃಶ್ಯ. ಆದ್ದರಿಂದ ಈ ದೃಕ್‍ದೃಶ್ಯಗಳೆರಡರೊಳಗೆ ಯಾವುದರಲ್ಲಿಯೂ ' ಅಹಂ ' ಎಂಬ ಅಭಿಮಾನವಿಲ್ಲ ದಾಗಿಬಿಡುತ್ತದೆ. ಆ ಪಕ್ಷದಲ್ಲಿ ಯಾವ ಮನುಷ್ಯನೂ ಅಭಿಮಾನಪುರಃಸರವಾಗಿ ವ್ಯವಹಾರಮಾರ್ಗಕ್ಕೆ ಇಳಿಯದೆ ಹೋದಾನು.

**ವಿವರಣೆ** :-ಅಭಿಮಾನವಿಲ್ಲದೆ ಯಾವ ವ್ಯವಹಾರವೂ ನಡೆಯುವುದಿಲ್ಲ. ವ್ಯವಹಾರ ನಡೆಯತ್ತಿದೆಯಾದ್ದರಿಂದ ಅಹಮಭಿಮಾನ ಯಾರಿಗೆ ? ಎಂಬ ಪ್ರಶ್ನೆ ಹುಟ್ಟುತ್ತದೆ. ಆತ್ಮನಿಗೆ ಅದು ಸರ್ವಥಾ ಇಲ್ಲ. ಅವನು ನಿರ್ವಿಕಾರ. ಆದ್ದರಿಂದ ಈ ಅಭಿಮಾನ ಬುದ್ಧಿಗೆ ಹುಟ್ಟುತ್ತದೆಯೆಂದು ಅವಶ್ಯ ಒಪ್ಪಬೇಕಾಗುತ್ತದೆ. ಏವಂಚ ಬುದ್ಧಿಗೆ ಹಿಂದೆ ಹೇಳಿದಂತೆ ಎರಡು ಬಗೆಯ ವೃತ್ತಿಗಳುಂಟು.

**ಅಹಮೀಕ್ಷ ಇತಿ ಪ್ರಥಮಂ ಹಿ ಧಿಯಾ**
**ಸುವಿಚಿಂತ್ಯ ತತೋ ವಿಷಯಾಭಿಮುಖಮ್ ।**
**ನಯನಂ ಪ್ರಹಿಣೋತಿ ತಥಾನ್ಯದಪಿ**
**ಶ್ರವಣಾದಿ ವಿಯತ್‍ಪ್ರಮುಖಸ್ಯ ಗುಣೇ ॥** ೧೯

' ನಾನು ನೋಡುತ್ತೇನೆ ' ಎಂದು ಮೊದಲು ಬುದ್ಧಿಯಿಂದ ಆಲೋಚಿಸಿ, ಅನಂತರ ವಿಷಯದ ಕಡೆಗೆ ಮನುಷ್ಯನು ಕಣ್ಣನ್ನು ಹೊರಳಿಸುತ್ತಾನೆ, ಹೀಗೆಯೇ ಕಿವಿ

ಮುಂತಾದ ಇಂದ್ರಿಯಗಳನ್ನು ಆಕಾಶಾದಿಗಳ ಗುಣಗಳಾದ ಶಬ್ದಾದಿಗಳ ಕಡೆಗೆ ಪ್ರೇರಿಸುತ್ತಾನೆ.

**ವಿವರಣೆ** :– ಜ್ಞಾನೇಂದ್ರಿಯಗಳು ಮತ್ತು ಕರ್ಮೇಂದ್ರಿಯಗಳು ತಮ್ಮ ವಿಷಯಗಳಲ್ಲಿ ಪ್ರವರ್ತಿಸುವುದೇ ವ್ಯವಹಾರ. ಈ ವ್ಯವಹಾರದಲ್ಲಿ 'ನಾನು–ನಾನು' ಎಂಬ ಅಭಿಮಾನ ಇದ್ದೇ ಇರುತ್ತದೆ.

**ಟಿಪ್ಪಣಿ** :– ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಆಕಾಶಾದಿ ಪಂಚಭೂತಗಳ ಗುಣಗಳು. ಇವನ್ನು ಕಿವಿ, ತ್ವಕ್, ಕಣ್ಣು, ನಾಲಿಗೆ, ಮೂಗು–ಎಂಬ ಪಂಚೇಂದ್ರಿಯಗಳು ಕ್ರಮವಾಗಿ ಗ್ರಹಿಸುತ್ತವೆ.

**ಅಪಹಾಯ ನ ಕಶ್ಚಿದಹಂಕರಣಂ**
**ವ್ಯವಹಾರಮುಪೈತಿ ಕದಾಚಿದಪಿ ।**
**ಉಪಪನ್ನತರಾ ಹಿ ಮತೇಸ್ತು ತತೋ**
**ವ್ಯವಹಾರಪಥಂ ಪ್ರತಿ ಕಾರಣತಾ ॥** ೨೦

ಅಹಂಕಾರವೃತ್ತಿಯಿಲ್ಲದೆ ಯಾವನೂ ಎಂದಿಗೂ ವ್ಯವಹಾರವನ್ನು ನಡೆಸುವುದೇ ಇಲ್ಲ. ಆದ್ದರಿಂದ ವ್ಯವಹಾರಕ್ಕೆ ಬುದ್ಧಿಯೇ ಕಾರಣವೆಂಬುದು ಅತ್ಯಂತ ಸ್ಫುಟವಾಗಿ ಉಪಪನ್ನವಾಗುತ್ತದೆ.

**ಟಿಪ್ಪಣಿ** :–ಅಹಂಕಾರವೆಂದರೆ 'ನಾನು' ಎಂಬ ಭಾವನೆ. ಇದೇ ಅಭಿಮಾನ ವೆನಿಸುತ್ತದೆ. ದರ್ಪ ಎಂದರ್ಥವಲ್ಲ.

**ಚಿತಿಶಕ್ತಿಗುಣಃ ಕಿಮಹಂಕರಣಂ**
**ಕಿಮು ಬುದ್ಧಿಗುಣೋಽಥ ಭವೇದುಭಯೋಃ ।**
**ಇತಿ ಚಿಂತ್ಯಮಿದಂ ಮನಸಾನಲಸೈಃ**
**ಉಪಪತ್ತಿಭಿರಾತ್ಮಹಿತಂ ಯತಿಭಿಃ ॥** ೨೧

ಅಹಂಕಾರವು ಚಿಚ್ಛಕ್ತಿಯೆನಿಸಿದ ಆತ್ಮನ ಗುಣವೊ? ಬುದ್ಧಿಯ ಗುಣವೊ? ಅಥವಾ ಆತ್ಮಬುದ್ಧಿ ಇವೆರಡರ ಗುಣವೊ?–ತಮಗೆ ಹಿತಕರವಾದ ಈ ವಿಷಯವನ್ನು ಯತ್ನಶೀಲರಾದ ಸಾಧಕರು ಆಲಸ್ಯವನ್ನು ತೊರೆದು ಯುಕ್ತಿಗಳಿಂದ ಪರಿಶೀಲಿಸಬೇಕಾಗಿರುತ್ತದೆ.

**ವಿವರಣೆ** :–ಪ್ರತಿಯೊಬ್ಬ ಮನುಷ್ಯನೂ ' ನಾನು ನಾನು ' ಎಂದುಕೊಳ್ಳುತ್ತ ಪ್ರವೃತ್ತಿಶೀಲನಾಗಿದ್ದಾನೆ. 'ನಾನು' ಎನ್ನುವ ಅಭಿಮಾನವೇ ಅಹಂಕಾರ. ಇದೇ 'ನನ್ನದು'

ಎಂಬ ಮಮಕಾರಕ್ಕೆ ನಿಮಿತ್ತವಾಗಿದೆ. ಈ ಅಹಂಕಾರ ಮಮಕಾರಗಳಿರುವುದರಿಂದಲೇ ಪ್ರವೃತ್ತಿಮಾರ್ಗ ನಡೆಯುತ್ತದೆ, ಸುಖಾಪೇಕ್ಷೆಯಿಂದ ತೊಡಗುವ ಮನುಷ್ಯನು ಇವುಗಳಿಂದಲೇ ನಾನಾ ದುಃಖಗಳನ್ನು ತಂದುಕೊಳ್ಳುತ್ತಾನೆ. ಈ ಅಹಂಕಾರಕ್ಕೆ ನಿಮಿತ್ತವೇನು? ಇದು ಎಲ್ಲಿ ಹುಟ್ಟುತ್ತದೆ ? ಎಂಬುದು ವಿಚಾರಣೀಯ. ಇದರ ಮೂಲವನ್ನರಿತರೆ ಪರಿಹಾರವನ್ನು ಚಿಂತಿಸಲು ಸಾಧ್ಯವಾಗುತ್ತದೆ. ಅಲ್ಲದೆ ಆತ್ಮನ ನಿಜಸ್ವರೂಪವನ್ನರಿಯಲು ವೇದಾಂತ ಶಾಸ್ತ್ರವು ಉಪಯಕ್ತವಾದದ್ದು. ಆತ್ಮನು ಶುದ್ಧನೆಂದೂ ಅವನಲ್ಲಿ ಯಾವ ಗುಣವೂ ಇಲ್ಲವೆಂದೂ ಉಪನಿಷತ್ತುಗಳು ಹೇಳುತ್ತವೆ. ಲೋಕದಲ್ಲಾದರೋ ' ನಾನು ನಾನು ' ಎಂದುಕೊಳ್ಳತಕ್ಕ ಜೀವನು ಅಹಂಕಾರವನ್ನು ಪಡೆದಿರುವಂತೆ ಅನುಭವ ಇದೆ. ತಾರ್ಕಿಕರೂ ಆತ್ಮನಲ್ಲಿ ಗುಣಗಳಿವೆ ಎನ್ನುತ್ತಾರೆ. ಆದ್ದರಿಂದ ಮೊದಲು ಈ ವಿಷಯವನ್ನು ಪರೀಕ್ಷಿಸಲು ಆಚಾರ್ಯರು ಉದ್ಯುಕ್ತರಾಗಿದ್ದಾರೆ.

**ಉಪಲಭ್ಯಮಹಂಕರಣಂ ನ ಭವೇತ್**
**ಪುರುಷಸ್ಯ ಗುಣೋ ಯದಿ ತರ್ಹಿ ಭವೇತ್ ।**
**ಗುಣಿರೂಪಮಥಾವಯವಂ ಗುಣಿನೋ**
**ನ ವಿಹಾಯ ಗುಣಃ ಪೃಥಗಸ್ತಿ ಯತಃ ॥ ೨೨**

ಅಹಂಕಾರವು ಪುರುಷನ (ಆತ್ಮನ) ಗುಣವಾಗಿದ್ದರೆ, ಅದು ಗುಣಿಯಾಗಿ ಆತ್ಮಸ್ವರೂಪವೇ ಆಗಿಬಿಡುತ್ತದೆಯಾದ್ದರಿಂದ ಪುರುಷನಿಗೆ ಗೋಚರಿಸುತ್ತಿರಲಿಲ್ಲ. ಹಾಗಲ್ಲದೆ ಗುಣವು ಗುಣಿಯಲ್ಲಿ ಸೇರಿಕೊಂಡು ಅದರ ಅವಯವವಾಗಿರುತ್ತದೆ ಎಂದರೆ ಸರಿಯಲ್ಲ. ಏಕೆಂದರೆ, ಅದು ಗುಣಿಯನ್ನು ಬಿಟ್ಟು ಪೃಥಕ್ಕಾಗಿ ಕಂಡು ಬರುವುದಿಲ್ಲ.

**ವಿವರಣೆ :– ' ಗುಣಗುಣಿನೋರಭೇದಃ, ಗುಣಸಮುದಾಯೋ ದ್ರವ್ಯಂ '** ಎಂದು ಸಿದ್ಧಾಂತವಿದೆ. ಗುಣವು ಗುಣಿಗಿಂತ ಬೇರೆಯಾದ್ದಲ್ಲ. ಅಹಂಕಾರವು ಆತ್ಮನ ಗುಣವಾಗಿದ್ದಲ್ಲಿ ಅದು ಆತ್ಮಸ್ವರೂಪವೇ ಆಗಿ ಬಿಡುತ್ತದೆ. ಆತ್ಮವು ದೃಕ್. ಅಹಂಕಾರವು ದೃಶ್ಯ. ದೃಕ್–ದೃಶ್ಯಗಳು ಬೇರೆ ಬೇರೆ. ಆತ್ಮನಿಗೆ ಆತ್ಮವೇ ವಿಷಯವಾಗಿ ಗೋಚರಿಸುತ್ತದೆ - ಎಂಬುದು ವಿರುದ್ಧ. ಅಹಂಕಾರವಾದರೋ ಆತ್ಮನಿಗೆ ಗೋಚರಿಸುತ್ತದೆ. ಆದ್ದರಿಂದ ಅಹಂಕಾರವೆಂಬ ಗುಣವು ಆತ್ಮಸ್ವರೂಪವಲ್ಲ. ಹಾಗಲ್ಲದೆ ಅವಯವದಂತೆ ಸೇರಿಕೊಂಡಿದ್ದು ಗುಣ ಎನ್ನುವುದೂ ಸರಿಯಲ್ಲ. ಮರದಿಂದ ಕೊಂಬೆಯನ್ನು ಬೇರ್ಪಡಿಸುವಂತೆ ಗುಣವನ್ನು ಬೇರ್ಪಡಿಸಿ ತೋರಿಸಲಾಗುವುದಿಲ್ಲ. ಅವಯವವಾಗಿದ್ದರೆ ಪ್ರತ್ಯೇಕವಾಗಿ ಕಾಣಬೇಕಾಗಿತ್ತು.

ನ ಗುಣೋ ಗುಣಿನಿ ಸ್ಥಿತವಾನ್ ಗುಣಿನಾ
ವಿಷಯೀಕ್ರಿಯತೇ ಸ ಚ ತಸ್ಯ ಗುಣೈಃ ।
ನ ಹಿ ದೇಶಕೃತಾ ನ ಚ ವಸ್ತುಕೃತಾ
ಗುಣಿನೋಽಸ್ತಿ ಗುಣಸ್ಯ ಭಿದಾ ತು ಯತಃ ॥ ೨೩

ಗುಣಿಯಲ್ಲಿ ಇರತಕ್ಕ ಗುಣವು ಗುಣಿಯಿಂದಾಗಲಿ ಅದರ ಗುಣಗಳಿಂದಾಗಲಿ ವಿಷಯೀಕೃತವಾಗುವುದಿಲ್ಲ. ಏಕೆಂದರೆ, ಗುಣಿಗಿಂತ ಗುಣಕ್ಕೆ ದೇಶಕೃತವಾದ ಅಥವಾ ವಸ್ತುಕೃತವಾದ ಭೇದವಿಲ್ಲ.

**ವಿವರಣೆ :** ಗುಣವೆಂದರೆ ಧರ್ಮ. ಗುಣಿಯೆಂದರೆ ಗುಣಕ್ಕೆ ಆಶ್ರಯವೆನಿಸುವ ಧರ್ಮಿ. ಈ ಧರ್ಮ ಧರ್ಮಿಗಳೆಂಬ ಭೇದ ಕೇವಲ ಬುದ್ಧಿ ಕಲ್ಪಿತವಾದದ್ದು. ಎಲೆಗೂ ಎಲೆಯ ಹಸಿರು ಬಣ್ಣಕ್ಕೂ ಭೇದವು ವಾಸ್ತವವಾಗಿ ಇಲ್ಲ. ಎಲೆಯಿಂದ ಪೃಥಕ್ಕರಿಸಿ ಹಸಿರನ್ನು ತೋರಿಸಲಾಗುವುದಿಲ್ಲ. ಹಸಿರು ಬೇರೆ ವಸ್ತುವಲ್ಲ. ಎಲೆಯನ್ನು ಬಿಟ್ಟು ಬೇರೆ ದೇಶದಲ್ಲಿ ಇರಲಾರದು. ಹಾಲು-ಬಿಳಿಪು ಇದ್ದ ಹಾಗೆ. ಹಾಗೆಯೇ ಅಹಂಕಾರವು ಆತ್ಮಧರ್ಮವಾದರೆ ಆತ್ಮನಿಗೆ ವಿಷಯವಾಗುತ್ತಿರಲಿಲ್ಲ. ಆದರೆ ವಿಷಯವಾಗುತ್ತದೆ. ಆದ್ದರಿಂದ ಅದು ಆತ್ಮಧರ್ಮವಲ್ಲ.

ಇದನ್ನೇ ಮುಂದಿನ ಶ್ಲೋಕಗಳಲ್ಲಿ ಉದಾಹರಣೆಯಿಂದ ಸ್ಪಷ್ಟೀಕರಿಸುತ್ತಾರೆ –

ನ ಪರಸ್ಪರ ಮಗ್ನಿಗುಣೋಽಗ್ನಿಗತೋ
ವಿಷಯತ್ವಮುಪೈತಿ ಕದಾಚಿದಪಿ ।
ನ ಹಿ ವಹ್ನಿರಪಿ ಸ್ವಗುಣಂ ಸ್ವಗತಂ
ವಿಷಯೀಕುರುತೇ ಸ್ವಗುಣೇನ ಭುವಿ ॥ ೨೪

ಅಗ್ನಿಯಲ್ಲಿರುವ ದಾಹಕತ್ವಾದಿ ಗುಣಗಳು ಪರಸ್ಪರ ಒಂದನ್ನೊಂದು ಎಂದಿಗೂ ವಿಷಯೀಕರಿಸುವುದಿಲ್ಲ-ಎಂದರೆ ಪ್ರಕಾಶಗೊಳಿಸುವುದಿಲ್ಲ. ಅಗ್ನಿಯೂ ಸಹ ತನ್ನಲ್ಲಿರುವ ಗುಣವನ್ನು ತನ್ನ ಸಾಮರ್ಥ್ಯದಿಂದ ತಾನೇ ಕಂಡುಕೊಳ್ಳುವುದಿಲ್ಲ.

**ವಿವರಣೆ :**-ಬೆಂಕಿಯಲ್ಲಿ ಪ್ರಕಾಶ, ಉಷ್ಣತೆ, ದಾಹಕತ್ವ, ಭಾಸುರವರ್ಣ ಮುಂತಾದ ಧರ್ಮಗಳಿವೆ. ಇವುಗಳಲ್ಲಿ ಪ್ರಕಾಶವನ್ನು ಉಷ್ಣತೆಯಾಗಲಿ, ಉಷ್ಣತೆಯನ್ನು ದಾಹಕತ್ವವಾಗಲಿ, ದಾಹಕತ್ವವನ್ನು ಭಾಸುರವರ್ಣವಾಗಲಿ ತೋರಿಸಿ ಕೊಡುವುದಿಲ್ಲ. ಮನುಷ್ಯನ ಇಂದ್ರಿಯಗಳು ಅವನ್ನು ತೋರಿಸಿಕೊಡುತ್ತವೆ. ಹಾಗಯೇ ಬೆಂಕಿಯು ತನ್ನಲ್ಲಿರುವ ಗುಣವನ್ನು ತಾನೇ ತಿಳಿದುಕೊಳ್ಳುವುದಿಲ್ಲ. ಪ್ರಕಾಶ ಮುಂತಾದ ಗುಣಗಳ

ಸಮೂಹವೇ ಅಗ್ನಿ. ಆದ್ದರಿಂದ ದೃಕ್ ಬೇರೆ ,ದೃಶ್ಯ ಬೇರೆ ಎಂದು ಸಿದ್ಧವಾಗತ್ತದೆ. ಆತ್ಮನಿಗೆ ದೃಶ್ಯವಾದ ಅಹಂಕಾರವು ಆತ್ಮಧರ್ಮವಾಗಲಾರದು.

**ಕಣಭುಗ್ ಯಮಚೀಕ್ಲ್‌ಪದತ್ಮಗುಣಂ**
**ಗುಣಪೂಗಮನಿತ್ಯಮನಾತ್ಮಗುಣಮ್ ।**
**ಅನಯೈವ ದಿಶಾ ಸ ನಿರಾಕ್ರಿಯತಾಂ**
**ನ ಹಿ ನಿತ್ಯಮನಿತ್ಯಗುಣೇನ ಗುಣಿ ॥** **೨೫**

ಕಣಾದಮುನಿಯು ಅನಿತ್ಯವೂ ಅನಾತ್ಮಗುಣವೂ ಆದ ಬುದ್ಧಿ, ಸುಖ, ದುಃಖ,ಇಚ್ಛಾ,ದ್ವೇಷ ಮುಂತಾದ ಕೆಲವು ಗುಣರಾಶಿಯನ್ನೇ ಆತ್ಮಗುಣವೆಂದು ಕಲ್ಪಿಸಿದ್ಧಾನೆ. ಅದೂ ಸಹ ಇದೇ ನ್ಯಾಯದಿಂದ ನಿರಾಕರಿಸಲ್ಪಡಬೇಕಾದದ್ದು. ಏಕೆಂದರೆ, ನಿತ್ಯವಾದ ಪದಾರ್ಥವು ಅನಿತ್ಯವಾದ ಗುಣದಿಂದ ಗುಣವತ್ತಾಗಲಾರದು.

**ವಿವರಣೆ** :–ಬುದ್ಧಿ (ಜ್ಞಾನ), ಸುಖ, ದುಃಖ, ಮೊದಲಾದವು. ಅನಿತ್ಯ ಗುಣಗಳು. ಗುಣವು ಗುಣಿಯ ಸ್ವರೂಪವೆಂಬುದು ಸಿದ್ಧಾಂತ. ಆತ್ಮನು ನಿತ್ಯ, ಅನಿತ್ಯ ಗುಣಗಳು ಆತ್ಮನಲ್ಲಿವೆಯೆಂದಾದರೆ ಆತ್ಮನೂ ಅನಿತ್ಯನಾಗಿ ಬಿಡುತ್ತಾನೆ. ಆದ್ದರಿಂದ ಕಣಾದಮುನಿಯು ಹೇಳಿದ್ದು ಸರಿಯಲ್ಲ. ಕಣಾದನ ವೈಶೇಷಿಕಮತದಲ್ಲಿಯೂ ಆತ್ಮನು ನಿತ್ಯನೇ ಆಗಿದ್ದಾನೆ. ಗುಣವು ಆತ್ಮನಲ್ಲಿ ಹುಟ್ಟುತ್ತದೆ–ನಶಿಸುತ್ತದೆ ಎಂದಾದರೆ ಆತ್ಮನು ವಿಕಾರಿ ಎನ್ನಬೇಕಾಗುತ್ತದೆ. ಯಾವುದು ವಿಕಾರಿಯೋ ಅದು ಅನಿತ್ಯ.

ಹಾಗಾದರೆ ನಿತ್ಯವಾದ ಆಕಾಶದಲ್ಲಿ ಅನಿತ್ಯವಾದ ಶಬ್ದಗುಣವನ್ನು ಒಪ್ಪಿದ್ದು ಹೇಗೆ ? ಎಂಬ ಪ್ರಶ್ನೆಗೆ, ಆಕಾಶವೂ ಅನಿತ್ಯವೇ ಎಂದು ಉತ್ತರಿಸುತ್ತಾರೆ -

**ವಿಯತಃ ಪ್ರಭವಂ ಪ್ರವದಂತಿ ಯತಃ**
**ಶ್ರುತಯೋ ಬಹುಶಃ ಖಮನಿತ್ಯಮತಃ ।**
**ಉಪಮಾನಮನಿತ್ಯಗುಣಂ ವಿಯತೋ**
**ನ ಹಿ ನಿತ್ಯಮಿಹಾಸ್ತಿ ಕಣಾದಮತೇ ॥** **೨೬**

ಆಕಾಶದ ಉತ್ಪತ್ತಿಯನ್ನು ವೇದಗಳು ಬಹುವಿಧದಲ್ಲಿ ಪ್ರತಿಪಾದಿಸುತ್ತವೆ. ಆದ್ದರಿಂದ ಆಕಾಶವು ಅನಿತ್ಯವಾದದ್ದು. ಆದಕಾರಣ 'ನಿತ್ಯವು ಅನಿತ್ಯಗುಣವುಳ್ಳದ್ದು' ಎಂಬುದಾಗಿ ಆಕಾಶದ ದೃಷ್ಟಾಂತವು ಕಣಾದಪಕ್ಷದಲ್ಲಿ ಹೊಂದುವುದಿಲ್ಲ.

**ವಿವರಣೆ**:–ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ (ತೈ ಬ್ರಹ್ಮ ೧) ಸ ಪ್ರಾಣಮಸೃಜತ। ಪ್ರಾಣಾತ್ ಶ್ರದ್ಧಾಂ ಖಂ ವಾಯುಂ (ಪ್ರಶ್ನ ೬–೪)

ಇತ್ಯಾದಿ ಶ್ರುತಿಗಳು ಆಕಾಶದ ಉತ್ಪತ್ತಿಯನ್ನು ಹೇಳಿವೆ. ಯಾವುದಕ್ಕೆ ಉತ್ಪತ್ತಿ ಇದೆಯೋ ಅದಕ್ಕೆ ನಾಶವಿರಲೇಬೇಕು. ಆದ್ದರಿಂದ ಆಕಾಶವು ಅನಿತ್ಯವೇ ಸರಿ.

ಮನಸಾ ಪುರುಷಃ ಪುರುಷೇಣ ಮನೋ
ನಭಸಾ ಮುಸಲಂ ಮುಸಲೇನ ನಭಃ ।
ನ ಹಿ ಯೋಗವಿಯೋಗಮುಪೈತಿ ಕುತೋಽ
ವಯವಿತ್ವ ನಿರಾಕರಣಾದಮುತಃ ॥ ೨೭

ಮನಸ್ಸಿನೊಡನೆ ಆತ್ಮನಾಗಲಿ ಆತ್ಮನೊಡನೆ ಮನಸ್ಸಾಗಲಿ, ಹಾಗೆಯೇ ಆಕಾಶದೊಡನೆ ಒನಕೆಯಾಗಲಿ ಒನಕೆಯೊಡನೆ ಆಕಾಶವಾಗಲಿ ಸಂಯೋಗವಿಯೋಗಗಳನ್ನು ಹೊಂದುವುದಿಲ್ಲ. ಏಕೆಂದರೆ, ಆತ್ಮ ಆಕಾಶ ಇವೆರಡಕ್ಕೂ ಅವಯವಿತ್ವವನ್ನು ನಿರಾಕರಿಸಲಾಗಿದೆ.

**ವಿವರಣೆ** :–ಆಕಾಶವು, ಆತ್ಮನೂ ವಿಭುಗಳು.ಇದನ್ನು ವೈಶೇಷಿಕರೂ ಒಪ್ಪಿದ್ದಾರೆ. ಇವುಗಳಿಗೆ ಅವಯವಗಳಿಲ್ಲ. ಅವಯವರಹಿತವಾದ ವಸ್ತು ಇನ್ನೊಂದರೊಡನೆ ಸಂಯೋಗವನ್ನು ಹೊಂದುವುದಿಲ್ಲ. ಸಂಯೋಗವಿಲ್ಲದ ಮೇಲೆ ವಿಯೋಗವೂ ಇಲ್ಲ. ಈ ಮಾತನ್ನು ಹೇಳಲು ಕಾರಣವೇನೆಂದರೆ, ಸುಖ ದುಃಖಾದಿಗುಣಗಳು ಮನೋಧರ್ಮಗಳೆಂದು ವೇದಾಂತಿಗಳು ಒಪ್ಪಿದ್ದಾರೆ. ಮನಸ್ಸು ಆತ್ಮನೊಡನೆ ಸೇರುತ್ತದೆಯೆಂದು ತಾರ್ಕಿಕರು ಹೇಳುತ್ತಾರೆ. ಆಗ ಮನೋಧರ್ಮಗಳನ್ನು ಆತ್ಮಧರ್ಮಗಳೆಂದು ಹೇಳಲು ಅಡ್ಡಿಯೇನು? ಸಕ್ಕರೆ ಹಾಲಿಗೆ ಸೇರಿದಾಗ ಅದರ ಸಿಹಿ ಹಾಲಿಗೆ ಸೇರಿ, ಹಾಲು ಸಿಹಿಯಾಗಿದೆಯೆಂದು ಹೇಳುತ್ತೇವಲ್ಲವೆ? ಹಾಗೆ ಮನೋಧರ್ಮವು ಆತ್ಮನಿಷ್ಠವೆಂದಾಗಲಿ - ಎಂದು ಶಂಕೆಯಂಟು. ಆದರೆ ಆತ್ಮಮನಃಸಂಯೋಗವೇ ಆಗುವುದಿಲ್ಲವೆಂದು ಆಚಾರ್ಯರು ಪ್ರತಿಪಾದಿಸುತ್ತಿದ್ದಾರೆ. ಅವುಗಳಿಗೆ ಸಂಯೋಗವಾದರೆ ಸಂಯೋಗವೆಂಬ ಗುಣ ಆತ್ಮನಲ್ಲಿ ಬಂದಿತು–ಎಂದು ಸಹ ಹೇಳಿ ಬಿಡಬಹುದು. ಆತ್ಮನಿಗೂ ಮನಸ್ಸಿಗೂ ಏಕೆ ಸಂಯೋಗವಾಗುವುದಿಲ್ಲವೆಂದರೆ -

ಇಹ ರಜ್ಜುಘಟಾದಿ ಹಿ ಸಾವಯವಂ
ಸಮುಪೈತಿ ಯುಜಾಮಿತರೇತರತಃ ।
ಇತಿ ದೃಷ್ಟಮತೋಽನ್ಯದದೃಷ್ಟಮಪಿ
ಸ್ವಯ ಮೂಹ್ಯಮಿದಂ ನ ಪರಿತ್ಯಜತಾ ॥ ೨೮

ಲೋಕದಲ್ಲಿ ಹಗ್ಗ ಗಡಿಗೆ ಮೊದಲಾದ ಸಾವಯವವಸ್ತುಗಳು ಪರಸ್ಪರ ಸಂಯೋಗವನ್ನು ಹೊಂದುತ್ತವೆಯೆಂಬುದು ಕಂಡು ಬಂದಿದೆ. ಆದ್ದರಿಂದ ಈ ಯುಕ್ತಿಯನ್ನು ಪರಿತ್ಯಜಿಸದೆ ವಿವೇಕಿಯಾದವನು ಕಾಣಬರದ ವಸ್ತುಗಳ ವಿಷಯ

ದಲ್ಲಿಯೂ ಎಂದರೆ ಆತ್ಮಮನಸ್ಸುಗಳ ವಿಷಯದಲ್ಲಿಯೂ ಇದೇ ನ್ಯಾಯವನ್ನು ಊಹಿಸಿಕೊಳ್ಳಬೇಕು. ಸಂಯೋಗವೆಂದರೆ ಅಂಟಿಕೊಳ್ಳುವುದು. ಅದು ವಸ್ತುವಿನ ಏಕದೇಶವಾದ ಅವಯವದಲ್ಲಿ ಸಂಭವಿಸುತ್ತದೆ. ಅವಯವವೇ ಇಲ್ಲದ ಆತ್ಮನಿಗೆ ಮನಸ್ಸು ಅಂಟಿಕೊಳ್ಳುವುದೆಂದರೇನು? ಎಂಬ ಯುಕ್ತಿಯನ್ನು ಬಿಡಬಾರದು.

ನ ಹಿ ಸಾವಯವಂ ವಿಗತಾವಯವೈಃ
ವಿಗತಾವಯವಂ ಚ ನ ಸಾವಯವೈಃ ।
ಉಪಯಾತಿ ಯುಜಾಮಿತಿ ದೃಷ್ಟಮಿದಂ
ಯತ ಏವಮತಃ ಸ್ಥಿತಮುಕ್ತಮದಃ ॥ ೨೯

ನಿರವಯವ ಪದಾರ್ಥಗಳೊಡನೆ ಸಾವಯವ ಪದಾರ್ಥವೂ ಸಾವಯವಪದಾರ್ಥಗಳೊಡನೆ ನಿರವಯಪದಾರ್ಥವೂ ಸಂಯೋಗವನ್ನು ಹೊಂದುವುದಿಲ್ಲವೆಂಬುದು ಕಂಡು ಬಂದಿರುತ್ತದೆ ಆದ್ದರಿಂದ ಆತ್ಮಮನಃಸಂಯೋಗವಿಲ್ಲವೆನ್ನುವ ಮಾತು ಸ್ಥಿರವಾಗಿ ನಿಲ್ಲುತ್ತದೆ.

ನ ಹಿ ಕಲ್ಪಿತಭಾಗಸಮಾಗಮನಂ
ವಿಗತಾವಯವಸ್ಯ ಘಟೇತ, ಕುತಃ ।
ವಿತಥತ್ವಮತಿಃ ಸುದೃಢಾ ತು ಯತಃ
ಪರಿಕಲ್ಪಿತವಸ್ತುಷು ಇತ್ಯಮುತಃ ॥ ೩೦

ಅವಯವರಹಿತವಾದ ಪದಾರ್ಥಕ್ಕೆ ಅದರಲ್ಲಿ ಕಲ್ಪಿತವಾದ ಭಾಗದೊಡನೆ ಸಂಬಂಧ ಏರ್ಪಡಲಿ–ಎಂಬುದೂ ಸರಿಯಲ್ಲ. ಏಕೆಂದರೆ, ಕಲ್ಪಿತವಸ್ತು ಮಿಥ್ಯೆ ಎಂಬ ಬುದ್ಧಿ ದೃಢವಾಗಿ ನಮ್ಮಲ್ಲಿ ನಿಂತಿರುತ್ತದೆ.

**ವಿವರಣೆ :**–ಆಕಾಶಕ್ಕೆ ಅವಯವವಿಲ್ಲದಿದ್ದರೂ ಮನಃಕಲ್ಪಿತವಾದ ಒಂದು ಅವಯವಭಾಗವನ್ನು ಇಟ್ಟುಕೊಂಡು ಘಟಾದಿಸಂಬಂಧವನ್ನು ಊಹಿಸಿಕೊಳ್ಳಬಹುದಲ್ಲ ? –ಎಂಬ ಶಂಕೆಗೆ ಇದು ಉತ್ತರ. ಅದಕ್ಕೆ ಅವಯವವು ಕಲ್ಪಿತವಾದ್ದರಿಂದ ಅದು ಮಿಥ್ಯೆಯೆಂದು ನಮಗೆ ಸ್ಪಷ್ಟವಾಗಿ ತಿಳಿದಿದೆ. ಮಿಥ್ಯಾವಸ್ತುವಿನೊಡನೆ ಸಂಬಂಧ ಏರ್ಪಡುವುದೇ ಇಲ್ಲ. ಅದು ಬರಿಯ ಊಹೆಯಾಗಿಯೇ ಉಳಿಯುತ್ತದೆ. ಬಿಸಲ್ಗುದುರೆಯು ನೀರೆಂಬುದು ಮಿಥ್ಯೆ. ಆ ನೀರನ್ನು ಎಂದಿಗೂ ಗಡಿಗೆಯಲ್ಲಿ ತುಂಬಿಕೊಳ್ಳಲಾಗುವುದೇ ಇಲ್ಲ.

ಆತ್ಮನು ನಿರ್ಗುಣನೆಂಬುದು ಶ್ರುತಿಸಿದ್ಧವಾಗಿದೆ–

ಇಹ ವೇದಶಿರಃಸು ತದರ್ಥವಿದಃ
ಪ್ರವದಂತಿ ಸಮಸ್ತಜಗತ್ಪ್ರಕೃತಿಮ್ ।
ಪರಮಾತ್ಮಪದಂ ದೃಶಿಮಾತ್ರವಪು-
ರ್ಧ್ರುವಮೇಕಮತೋಽನ್ಯದನಿತ್ಯಮಿತಿ ॥ ೩೧

ಉಪನಿಷದರ್ಥವನ್ನು ತಿಳಿದಿರುವ ವಿದ್ವಾಂಸರು ಉಪನಿಷತ್ತುಗಳಲ್ಲಿ ಸಮಸ್ತ ವಿಶ್ವಕ್ಕೂ ಉಪಾದಾನಕಾರಣವಾದ ಪರಮಾತ್ಮನು ದೃಙ್ಮಾತ್ರಶರೀರನೆಂದೂ ನಿತ್ಯನೆಂದೂ ಅದ್ವಿತೀಯನೆಂದೂ ಹೇಳುತ್ತಾರೆ ಪರಮಾತ್ಮನಿಗಿಂತ ಅತಿರಿಕ್ತವಾಗಿ ತೋರುವುದೆಲ್ಲ ಅನಿತ್ಯವೆಂದು ಹೇಳಿದ್ದಾರೆ.

**ವಿವರಣೆ :-**ಪರಮಾತ್ಮನು ದೃಕ್ ಸ್ವರೂಪನು, ಅವನೊಬ್ಬನೇ ನಿತ್ಯನಾದವನು. ದೃಶ್ಯವಾದುದೆಲ್ಲ ಅನಿತ್ಯವಾದದ್ದು. ಅಹಂಕಾರಾದಿಗುಣಗಳೆಲ್ಲ ದೃಶ್ಯವಾಗುವುದರಿಂದ ಆತ್ಮಸ್ವರೂಪದಲ್ಲಿ ಸೇರತಕ್ಕದ್ದಲ್ಲ; ಆದ್ದರಿಂದ ಆತ್ಮನು ನಿರ್ಗುಣನೆಂದೂ ಹೇಳಿದಂತಾಯಿತು.

ಅತ ಏವ ನ ಕಿಂಚಿದುದಾಹರಣಂ
ಧ್ರುವಮಸ್ತಿ ಪರಸ್ಯ ವಿನಾಶಿಗುಣಮ್ ।
ಯತ ಏವಮತಃ ಸ್ಥಿತಮುಕ್ತಮದೋ
ನ ಹಿ ನಿತ್ಯಮನಿತ್ಯಗುಣೇನ ಗುಣಿ ॥ ೩೨

ಆದ್ದರಿಂದ ಪ್ರತಿವಾದಿಯಾದ ತಾರ್ಕಿಕನಿಗೆ ಅನಿತ್ಯಗುಣವುಳ್ಳ ನಿತ್ಯವಸ್ತುವನ್ನು ತೋರಿಸಲು ಒಂದು ಉದಾಹರಣೆಯೂ ಇರುವುದಿಲ್ಲ. ಈ ಪರಿಸ್ಥಿತಿಯಾದಾಗ ಹಿಂದೆ ನಾವು ಹೇಳಿದಂತೆ ' **ನ ಹಿ ನಿತ್ಯಮನಿತ್ಯಗುಣೇನ ಗುಣಿ** ' (ಶ್ಲೋ. ೩೫)ಎಂಬುವದೇ ದೃಢವಾಗಿ ನಿಲ್ಲುತ್ತದೆ.

ಉಪಲಭ್ಯಮಹಂಕರಣಂ ಭವಿತುಂ
ಕ್ಷಮತೇ ದೃಶಿರೂಪಗುಣೋ ನ ಯತಃ ।
ವಿಷಯಾಕೃತಿರಂಜಿತಧೀಗುಣವತ್
ವಿಷಯತ್ವಮಹಂಕರಣಸ್ಯ ತತಃ ॥ ೩೩

ಈ ಪ್ರಕಾರವಾಗಿ ಅಹಂಕಾರವು ದೃಕ್ ರೂಪವಾದ ಆತ್ಮನ ಗುಣವಲ್ಲವಾದ್ದರಿಂದ, ಅದು ಉಪಲಭ್ಯ- ದೃಶ್ಯವಾಗಿರುತ್ತದೆ. ವಿಷಯವಾದ ಘಟಾದಿ ವಸ್ತುವಿನ ಆಕೃತಿಯನ್ನು ಪಡೆಯುವ ಬುದ್ಧಿವೃತ್ತಿಯಂತೆ ಅಹಂಕಾರವೂ ಚೈತನ್ಯಕ್ಕೆ ವಿಷಯವಾಗುತ್ತದೆ.

**ವಿವರಣೆ** :–ಘಟಾದಿ ಪದಾರ್ಥಗಳು ಕಣ್ಣಿಗೆ ಗೋಚರಿಸುತ್ತವಷ್ಟೆ, ಆಗ ಬುದ್ಧಿಯು (ಅಂತಃಕರಣವೃತ್ತಿ) ಘಟಾದಿ ವಿಷಯಾಕಾರವನ್ನು ಹೊಂದುತ್ತದೆ. ಆಗ ಘಟವು ಘಟಾಕಾರವನ್ನೂ ಹೊಂದಿದ ಬುದ್ಧಿಯೂ ಆತ್ಮಚೈತನ್ಯಕ್ಕೆ ವಿಷಯಗಳೆಂದು ಸಿದ್ಧಾಂತ ವಿದೆ. ಆದ್ದರಿಂದಲೇ ನನಗೆ ಘಟಜ್ಞಾನವಾಯಿತು ಎಂದು ಅನುಭವವಾಗುತ್ತದೆ. ಇಲ್ಲಿ ' ನನಗೆ 'ಅಂಶವೇ ಅಹಂಕಾರ. ಇದು ಒಂದು ಅಂತಃಕರಣ ವೃತ್ತಿ. ಸುಖ ದುಃಖ ದ್ವೇಷಾದಿಗಳು ಇದೇ ಬಗೆಯ ವೃತ್ತಿಗಳು. ಇವೆಲ್ಲವೂ ಸಾಕ್ಷಿಭಾಸ್ಯಗಳೆಂದು ಹೇಳಲಾಗಿದೆ. ಸುಖ ದುಃಖಾದಿಗಳಂತೆ ಅಹಂಕಾರವೂ ವಿಷಯವಾದ್ದರಿಂದ ದೃಶ್ಯವೆಂದು ಅಭಿಪ್ರಾಯ.

**ಸಾಕ್ಷಿಯೇ ಪರಮಾತ್ಮ–**

**ವಿಷಯಪ್ರಕೃತಿಂ ಪ್ರತಿಪನ್ನವತೀಂ**
**ಮತಿವೃತ್ತಿಮಹಂಕರಣಂ ಚ ಮತೇಃ ।**
**ಉಭಯಂ ಪರಿಪಶ್ಯತಿ ಯೋಽವಿಕೃತಃ**
**ಪರಮಾತ್ಮಸದುಕ್ತಿರಸೌ ಪುರುಷಃ ॥** ೩೪

ವಿಷಯಸ್ವರೂಪವನ್ನು ಪಡೆದ ಯಾವ ಬುದ್ಧಿವೃತ್ತಿಯಂಟೋ ಅದು ಮತ್ತು ಬುದ್ಧಿವೃತ್ತಿಯೇ ಆದ ಅಹಂಕಾರ–ಇವೆರಡನ್ನು ಸಾಕ್ಷಿಯಾಗಿನೋಡತಕ್ಕ ಅವಿಕಾರಿ ಪುರುಷನೇ ಪರಮಾತ್ಮನೆಂದೂ ಸತ್ ಎಂದೂ ಹೇಳಲ್ಪಡುತ್ತಾನೆ.

**ವಿವರಣೆ** :–ಇಂದ್ರಿಯ ಗೋಚರವಾಗತಕ್ಕ ಪಂಚಭೂತಾದಿಗಳು ಬುದ್ಧಿಯ ವೃತ್ತಿಗಳೇ. ನಾನು–ನಾನು ಎಂದುಕೊಳ್ಳುವುದೂ ಬುದ್ಧಿವೃತ್ತಿಯೇ. ಇವೆರಡೂ ದೃಶ್ಯಗಳೆಂದೂ ಆತ್ಮವಲ್ಲವೆಂದೂ ಹಿಂದೆ ತಿಳಿಸಿದ್ದಾಗಿದೆ. ಇವೆರಡನ್ನೂ ಸಾಕ್ಷಿಯಾಗಿ ನೋಡುತ್ತಿರುವ ಆತ್ಮನೇ ಪರಮಾತ್ಮನು. ಉಭಯ ದೃಶ್ಯಗಳಿಗೂ ಅವನು ದೃಕ್ ಆಗಿದ್ದಾನೆ. " ನಾನ್ಯೋಽತೋಽಸ್ತಿ ದ್ರಷ್ಟಾ "–ಎಂಬ ಬೃಹದಾರಣ್ಯಕ ಶ್ರುತಿಯಲ್ಲಿ (೩–೭–೨೩) ಆತ್ಮನಿಗಿಂತ ಭಿನ್ನವಾದ ಇನ್ನೊಬ್ಬ ದ್ರಷ್ಟೃವಿಲ್ಲ ಎಂದು ಹೇಳಿದೆ. ಹೀಗೆ ವಿಚಾರಮಾಡಲಾಗಿ ದೇಹಧಾರಿಯಾಗಿ ತೋರುವ ಜೀವನೇ ವಾಸ್ತವವಾಗಿ ಸಾಕ್ಷಿಯೆಂದೂ ಪರಮಾತ್ಮನೆಂದೂ ತಿಳಿದು ಬರುತ್ತದೆ.

**ಇದರ ಮೇಲೆ ಆಕ್ಷೇಪ–**

**ನನು ದೇಹಭೃದೇಷ ಕಥಂ ಭವತಾ–**
**ಭಿಹಿತಃ ಪರಮಾತ್ಮಸದುಕ್ತಿರಿತಿ ।**
**ನ ವಿರುದ್ಧಮವಾದಿಷಮೇತಮಹಂ**
**ಶ್ರುತಿರಪ್ಯಮುಮರ್ಥಮುವಾಚ ಯತಃ ॥** ೩೫

ದೇಹಧಾರಿಯಾಗಿರುವ ಈ ಜೀವನು ಪರಮಾತ್ಮನೆಂದೂ ಸತ್ ಎಂದೂ ನೀನು ಹೇಳಿದ್ದು ಹೇಗೆ ? (ಉತ್ತರ)–ಇಲ್ಲ; ನಾನು ವಿರುದ್ಧವಾಗಿ ಹೇಳಲಿಲ್ಲ.ಏಕೆಂದರೆ, ಶ್ರುತಿಯೇ ಈ ವಿಷಯವನ್ನು ಸ್ಪಷ್ಟವಾಗಿ ಹೇಳಿದೆ.

**ವಿವರಣೆ :**–"**ಅಯಮಾತ್ಮಾಬ್ರಹ್ಮ**", "**ತತ್ತ್ವಮಸಿ**", "**ಅಹಂ ಬ್ರಹ್ಮಾಸ್ಮಿ**"– ಮುಂತಾದ ಶ್ರುತಿವಾಕ್ಯಗಳು ಈ ಜೀವವೇ ವಾಸ್ತವವಾಗಿ ಬ್ರಹ್ಮವೆಂದು ಹೇಳಿವೆ. ಪರಮಾತ್ಮನು ಸರ್ವಜ್ಞನೂ, ಸರ್ವಶಕ್ತನೂ ಆಗಿದ್ದಾನೆ ; ಜೀವನು ಅಲ್ಪಜ್ಞನೂ, ಅಲ್ಪಶಕ್ತನೂ ಆಗಿದ್ದಾನೆ–ಎಂಬ ವಿರೋಧವು ಕಂಡುಬಂದರೂ ಅದು ಉಪಾಧಿನಿಮಿತ್ತ ವಾದದ್ದು. ಈ ಉಪಾಧಿಗಳನ್ನು ಕಳಚಿಹಾಕಿದಾಗ ಜೀವನೂ ಈಶ್ವರನೂ ಶುದ್ಧ ಚೇತನರೂಪರಾಗಿಯೇ ಇರುತ್ತಾರೆ. ಘಟಾಕಾಶ–ಮಹಾಕಾಶಗಳಿಗೆ ಹೇಗೆ ಭೇದವಿ ಲ್ಲವೋ ಹಾಗೆ, ಇವರಿಬ್ಬರಿಗೂ ಭೇದವಿಲ್ಲ.

**ಅಮತಂ ನ ಮತೇರಮತಸ್ತದಿದಂ**
**ಯದಮುತ್ರ ತದೇವ ತು ಕಶ್ಚಿದಿತಿ ।**
**ಶ್ರುತಿಷು ಪ್ರತಿಪಾದಿತಮಸ್ಯ ದೃಶೇಃ**
**ಪರಮಾತ್ಮಪದತ್ವಮಮೂಷು ಭೃಶಮ್ ॥** ೩೬

**ಅಮತಂ–ನಮತೇಃ–ಅಮತಃ–ತತ್–ಇದಂ–ಯದಮುತ್ರ ತದೇವ–ಕಶ್ಚಿತ್** –ಇತ್ಯಾದಿ ಶ್ರುತಿವಚನಗಳಲ್ಲಿ ದೃಕ್ ಅದ ಈ ಪ್ರತ್ಯಗಾತ್ಮನೇ ಪರಮಾತ್ಮನೆಂದು ಮತ್ತೆ ಮತ್ತೆ ಸ್ಪಷ್ಟವಾಗಿ ಹೇಳಲಾಗಿದೆ.

**ವಿವರಣೆ** : ೧. ಅಮತಂ ಮಂತೃ ಅವಿಜ್ಞಾತಂ ವಿಜ್ಞಾತೃ (ಬೃಹ. ೩-೨-೧೧) - ಅದು ಮನಸ್ಸಿಗೆ ಗೋಚರವಲ್ಲ. ಆದರೆ ಮಂತೃವಾಗಿದೆ. ಅದು ವಿಜ್ಞಾತವಲ್ಲ, ಸ್ವಯಂ ವಿಜ್ಞಾತೃ.

೨. ನ ಮತೇರ್ಮಂತಾರಂ ಮನ್ವೀಥಾಃ (ಬೃಹ ೩-೪-೨) - ಮತಿಯೆಂಬ ಮನೋವೃತ್ತಿಯ ಸಾಕ್ಷಿಯನ್ನು ನೀನು ಮನನ ಮಾಡಲಾರೆ.

೩. **ಅಮತೋ ಮಂತಾ** (ಬೃಹ, ೩-೭-೨೩) ಅವನು ಅದೃಷ್ಟನೂ, ಅಶ್ರುತನೂ ಆಗಿರುವುದರಿಂದ ಅಮತನು. ಆದರೆ, ಮನಸ್ಸಿನಲ್ಲಿ ಸಂನಿಹಿತವಾಗಿ ಮಂತೃವಾಗಿದಾನೆ.

೪. ಅ) **ತದೇತದ್ ಬ್ರಹ್ಮಾಪೂರ್ವಮ್** (ಬೃಹ ೨-೫-೧೯)-ಈ ಪ್ರತ್ಯ ಗಾತ್ಮನು ಕಾರಣರಹಿತನಾದ ಬ್ರಹ್ಮವಾಗಿದ್ದಾನೆ.

ಆ) ತತ್ತ್ವಮಸಿ -(ಛಾಂ. ೬-೮-೭)ಆ ಸದಾತ್ಮನೇ ನೀನು.

**೫. ಇದಂ ಸರ್ವಂ ಯದಯಮಾತ್ಮಾ -ಇರತಕ್ಕ ಈ ಸರ್ವವೂ ಆತ್ಮವೇ.**

**೬. ಯದೇವೇಹ ತದಮುತ್ರ ಯದಮುತ್ರ ತದನ್ವಿಹ-(ಕಠ.೨-೪-೧೦) -ಈ** ದೇಹೋಪಾಧಿಯಲ್ಲಿರುವ ಯಾವ ಆತ್ಮವಿದೆಯೋ ಅದೇ ಜಗತ್ಕಾರಣೋಪಾಧಿ ಯುಳ್ಳ ಆತ್ಮವಾಗಿದೆ.

**೭. ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವ ಮಿಚ್ಛನ್ -** (ಕಠ. ೨-೪-೧) ವಿವೇಕಿಯಾದವನೊಬ್ಬನು ವಿಷಯಗಳಿಂದ ನಿವೃತ್ತೇಂದ್ರಿಯನಾಗಿ, ಮೋಕ್ಷವನ್ನು ಬಯಸತಕ್ಕವನಾಗಿ, ಪ್ರತ್ಯಗಾತ್ಮನನ್ನು (ತನ್ನನ್ನು) ತಿಳಿದುಕೊಳ್ಳುತ್ತಾನೆ.

ಮೇಲ್ಕಂಡ ಶ್ರುತಿಗಳು ಅಂತರಾತ್ಮವೇ (ಜೀವವೇ) ಬ್ರಹ್ಮವೆಂದು ಸ್ಪಷ್ಟವಾಗಿ ಹೇಳಿವೆ.

**ಯದನಭ್ಯುದಿತಂ ವದನೇನ ಸದಾ**
**ನಯನೇನ ಚ ಪಶ್ಯತಿ ಯನ್ನ ಸದಾ ।**
**ಶ್ರವಣೇನ ಚ ಯನ್ನ ಶೃಣೋತಿ ಸದಾ**
**ಮನಸಾಪಿ ಚ ಯನ್ಮನುತೇ ನ ಸದಾ ॥** **೩೭**

**ವದನಂ ನಯನಂ ಚ ತಥಾ ಶ್ರವಣಂ**
**ಮನ ಏವ ಚ ಯೇನ ಮತಂ ಸತತಮ್ ।**
**ಅವಗಚ್ಛ ತದೇವ ಪದಂ ಪರಮಂ**
**ತ್ವಮಿತಿ ಶ್ರುತಿರೀಕ್ಷಿತುರುಕ್ತವತೀ ॥** **೩೮**

ಯಾವುದು ವಾಗಿಂದ್ರಿಯದಿಂದ ಎಂದಿಗೂ ಉಕ್ತವಾಗುವುದಿಲ್ಲವೋ, ಯಾವುದನ್ನು ಮನುಷ್ಯನು ಕಣ್ಣಿನಿಂದ ಕಾಣನೋ, ಕಿವಿಯಿಂದ ಕೇಳಲಾರನೋ ಮನಸ್ಸಿನಿಂದ ತಿಳಿಯಲಾರನೋ, (ಮತ್ತೇನೆಂದರೆ)-ಯಾವುದರಿಂದ ಸದಾ ವಾಗಿಂದ್ರಿ ಯವೇ ಪ್ರೇರಿತವಾಗುತ್ತದೆಯೋ ಕಣ್ಣು ನೋಡಲ್ಪಡುತ್ತದೆಯೋ, ಕಿವಿ ಕೇಳಲ್ಪಡುತ್ತ ದಯೋ ಮನಸ್ಸು ತಿಳಿಯಲ್ಪಡುತ್ತದೆಯೋ ಅದೇ ಪರಮಪದವೆಂದು ನೀನು ತಿಳಿದುಕೋ-ಎಂಬುದಾಗಿ ದೃಕ್ ಆದ ಆತ್ಮನಿಗೇ ಪರಮಾತ್ಮಸ್ವರೂಪವನ್ನು ವೇದವು ಹೇಳಿದೆ.

**ವಿವರಣೆ :**

**ಯದ್ವಾಚಾನುಭ್ಯುದಿತಂ ಯೇನವಾಗಭ್ಯುದ್ಯತೇ ।**
**ತದೇವ ಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥**
**(ಕಠ.೧-೨-೪)**

ಇತ್ಯಾದಿ ಶ್ರುತಿಗಳಲ್ಲಿ ಮೇಲ್ಕಂಡ ವಿಚಾರ ಬಂದಿದೆ. ಯಾವ ಚೈತನ್ಯ ಜ್ಯೋತಿಯಿಂದ ವಾಗಿಂದ್ರಿಯಾದಿಗಳು ಬೆಳಗುತ್ತವೆಯೋ, ಯಾವುದು ಈ ಇಂದ್ರಿಯ ವ್ಯಾಪಾರಗಳಿಗೆ ಸಾಕ್ಷಿಯಾಗಿ ತಟಸ್ಥವಾಗಿರುವುದೋ ಅದೇ ಬ್ರಹ್ಮ. ಉಪಾಧಿಭೇದ ವಿಶಿಷ್ಟರಾದ ಈಶ್ವರಾದಿಗಳು ಬ್ರಹ್ಮವಲ್ಲ-ಎನ್ನುತ್ತದೆ ಶ್ರುತಿ. **ವಾಚೋ ಹ ವಾಕ್ ಚಕ್ಷುಷಶ್ಚಕ್ಷುಃ**-ಇತ್ಯಾದಿ ಶ್ರುತಿಗಳೂ ಇದೇ ವಿಷಯವನ್ನು ದೃಢೀಕರಿಸಿವೆ.

**ಪರಮಾತ್ಮಪದತ್ವ ಇಯಂ ಚ ಮಯಾ**
**ಶ್ರುತಿರಲ್ಪಕಣೋಕ್ತಿರಿಹಾಭಿಹಿತಾ ।**
**ಅಣಿಮಾದಿಗುಣಂ ಸದಿತಿ ಪ್ರಕೃತಂ**
**ತದಸಿ ತ್ವಮಿತಿ ಶ್ರುತಿರಭ್ಯವದತ್ ॥** ೩೯

ಜೀವನು ಪರಮಾತ್ಮನೇ ಎಂಬ ವಿಷಯದಲ್ಲಿ ಪ್ರಮಾಣವಾಗಿ ನಾನು ಈ ರೀತಿ ಕೆಲವು ಮಾತ್ರ ಪರಿಮಿತವಾಗಿ ಶ್ರುತಿವಾಕ್ಯಗಳನ್ನು ಉದಾಹರಿಸಿದ್ದೇನೆ, ಅಣಿಮಾದಿ ಗುಣ ಉಳ್ಳದ್ದೂ (ಅತ್ಯಂತ ಸೂಕ್ಷ್ಮವಾಗಿ ದುರ್ಜ್ಞೇಯವಾದದ್ದೂ) ಸತ್ - ಎಂದು ಪ್ರಕೃತವಾದದ್ದೂ ಆದ ಬ್ರಹ್ಮವೇ ನೀನೆಂದು ಶ್ರುತಿಯು ಹೇಳಿದೆ.

**ವಿವರಣೆ :**

**ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಮ್**- (ಛಾಂ. ೬-೨-೧)-ಎಂದು ಶ್ರುತಿ ಇದೆ. " ಹೇ ಸೋಮ್ಯ, ಸೃಷ್ಟಿಗೆ ಮೊದಲು ಸಜಾತೀಯ-ವಿಜಾತೀಯ-ಸ್ವಗತ ಎಂಬ ಭೇದವಿಲ್ಲದ ಸತ್ ಎನಿಸಿಕೊಳ್ಳತಕ್ಕ ಬ್ರಹ್ಮವೊಂದೇ ಇತ್ತು. ಅದು ಈಕ್ಷಣಪೂರ್ವಕವಾಗಿ ಜಗತ್ತನ್ನು ಸೃಷ್ಟಿಸಿ ಜೀವಭಾವ ದಿಂದ ತಾನೇ ಪ್ರವೇಶಿಸಿತು "- ಎಂದು ಹೇಳಿದೆ. ಅನಂತರ-**ಸಯ ಏಷೋಽಣಿ ಮೈತದಾತ್ಮ್ಯಮಿದಂ ಸರ್ವಂ। ತತ್ಸತ್ಯಂ। ಸ ಆತ್ಮಾ। ತತ್ತ್ವಮಸಿ ಶ್ವೇತಕೇತೋ।** (ಛಾಂ. ೬-೮-೭) - ಎಂದು ಹೇಳಿದೆ. ಈ ಬ್ರಹ್ಮವಸ್ತು ಅಣುವಿನಂತೆ ಅತ್ಯಂತ ಸೂಕ್ಷ್ಮವಾಗಿ, ದುರ್ಜ್ಞೇಯವಾಗಿದೆ. ಸರ್ವವೂ ಅದೇ ಆಗಿದೆ. ಅದೇ ಆತ್ಮ. ಶ್ವೇತಕೇತು, ಅಂತಹ ಆತ್ಮನೇ ನೀನು-ಎಂದು ಶ್ರುತಿಯು ಜೀವನಿಗೂ, ಬ್ರಹ್ಮಕ್ಕೂ ಅಭೇದವನ್ನು ಬೋಧಿಸಿದೆ. " **ಸ ಆತ್ಮಾ** "-ಎಂಬ ವಾಕ್ಯದಲ್ಲಿ ಪೂರ್ವಪ್ರಕೃತವಾದ ಸದ್ರೂಪ

ಬ್ರಹ್ಮವನ್ನೇ ಆತ್ಮನೆಂದು ಹೇಳಿ, ಮುಂದಿನ ವಾಕ್ಯದಲ್ಲಿ ಬ್ರಹ್ಮವೇ ನೀನು ಎಂದು ಹೇಳಿರುವುದು ಸ್ಪಷ್ಟವಾಗಿದೆ.

ಜೀವವು ಬ್ರಹ್ಮದ ಅವಯವವಲ್ಲ, ವಿಕಾರವೂ ಅಲ್ಲ–

**ನಭಸೋಽವಯವೋ ವಿಕೃತಿಶ್ಚ ಯಥಾ**
**ಘಟಿಕಾದಿ ನಭೋ ನ ಭವೇತ್ತು ಯಥಾ ।**
**ಪರಮಾತ್ಮನ ಏಷ ನ ಚಾವಯವೋ**
**ವಿಕೃತಿಶ್ಚ ಶರೀರಭೃದಿತ್ಯಮೃಷಾ ॥ ೪೦**

ಘಟಾದಿಗಳ ಉಪಾಧಿಯಿಂದ ಘಟಾಕಾಶ ಮುಂತಾದ ಹೆಸರಿನಿಂದ ವ್ಯವಹಾರ ವಿದ್ದರೂ ಈ ಔಪಾಧಿಕವಾದ ಆಕಾಶವು ಮಹಾಕಾಶದ ಅವಯವವೂ ಅಲ್ಲ, ಅದರ ವಿಕಾರವೂ ಅಲ್ಲ. ಹಾಗೆಯೇ ಶರೀರೋಪಾಧಿಯುಳ್ಳ ಜೀವಾತ್ಮನು ಪರಮಾತ್ಮನ ಅವಯವವೂ ಅಲ್ಲ, ವಿಕಾರವು ಅಲ್ಲ. ಕಿಂತು ಪರಮಾತ್ಮನೇ ಆಗಿದ್ದಾನೆ–ಎಂಬುದು ಸತ್ಯವಾದ ಸಿದ್ಧಾಂತ.

ಜೀವವೆಂಬ ವ್ಯವಹಾರವು ಉಪಾಧಿನಿಮಿತ್ತವಾದದ್ದು–

**ಕರಕಾದಿನಿಮಿತ್ತಕಮೇವ ಯಥಾ**
**ಕರಕಾಂಬರನಾಮ ಭವೇದ್ವಿಯತಃ ।**
**ಪರಮಾತ್ಮದೃಶೇರಪಿ ನಾಮ ತಥಾ**
**ಪರಹೇತುಕಮೇವ ತು ಜೀವ ಇತಿ ॥ ೪೧**

ಕಮಂಡಲು–ಮುಂತಾದ ಉಪಾಧಿನಿಮಿತ್ತವಾಗಿ ಆಕಾಶಕ್ಕೆ ಕರಕಾಕಾಶ ಎಂಬ ಹೆಸರು ಹೇಗೆ ಬರುತ್ತದೆಯೋ ಹಾಗೆ ದೃಕ್‌ಸ್ವರೂಪನಾದ ಪರಮಾತ್ಮನಿಗೆ ಅನ್ಯವಾದ ದೇಹದ ನಿಮಿತ್ತದಿಂದಲೇ ಜೀವ ಎಂಬ ಹೆಸರು ಬಂದಿದೆ.

**ಜನಿತಂ ವಿಯದಗ್ರಣಿ ಯೇನ ಜಗತ್**
**ಪರಮಾತ್ಮ ಸದಕ್ಷರನಾಮ ಭೃತಾ ।**
**ಪ್ರವಿವೇಶ ಸ ಏವ ಜಗತ್‌ಸ್ವಕೃತಂ**
**ಖಮಿವೇಹ ಘಟಂ ಘಟಸೃಷ್ಟಿಮನು ॥ ೪೨**

ಪರಮಾತ್ಮ, ಸತ್, ಅಕ್ಷರ–ಎಂಬ ಹೆಸರಿನ ಯಾವ ಚೇತನವು ಆಕಾಶ ಪೂರ್ವಕವಾಗಿ ಈ ಜಗತ್ತನ್ನು ನಿರ್ಮಿಸಿತೋ, ಅದೇ ತಾನು ನಿರ್ಮಿಸಿದ ಜಗತ್ತನ್ನು,

ಗಡಿಗೆಯನ್ನು ಮಾಡಿದೊಡನೆ ಆಕಾಶವು ಹೇಗೆ ಗಡಿಗೆಯನ್ನು ಪ್ರವೇಶಿಸುವುದೋ ಹಾಗೆ, ಪ್ರವೇಶಿಸಿತು.

**ವಿವರಣೆ :**

**ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶ: ಸಂಭೂತ:** (ತೈ. ೨-೧)- ಆ ಆತ್ಮನಿಂದ ಆಕಾಶವು ಹುಟ್ಟಿತು, ಈ ಪ್ರಕಾರ ಪಂಚಭೂತಗಳ ಸೃಷ್ಟಿಯಾಯಿತು. ಅನಂತರ -**ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್** (ತೈ. ೨-೬)-ಅದನ್ನು ಸೃಷ್ಟಿಸಿ ಅದರೊಳಗೆ ಅನುಪ್ರವೇಶಮಾಡಿತು-ಎಂದು ಶ್ರುತಿಯ ಹೇಳಿದೆ. ಇಲ್ಲಿ ಅನುಪ್ರವೇಶವೆಂಬುದು ಲೌಕಿಕ ದೃಷ್ಟಿಯಿಂದ ಮಾತ್ರ. ವಿಭುವಾದ ಆತ್ಮ ಎಲ್ಲೆಲ್ಲಿಯೂ ಇದ್ದೇ ಇರುತ್ತದೆ. ಗಡಿಗೆಯಲ್ಲಿ ಆಕಾಶವು ಮೊದಲೇ ಹೇಗೆ ಇರುತ್ತದೆಯೋ ಹಾಗೆ ದೇಹವನ್ನು ಆತ್ಮವು ಪ್ರವೇಶಿಸಿತು-ಎಂದರೆ, ಅಲ್ಲಿ ಉಪಲಭ್ಯಮಾನವಾಗಿದೆ ಯೆಂದಿಷ್ಟೇ ಅರ್ಥ.

**ಉದಪದ್ಯತ ಖಪ್ರಮುಖಂ ಹಿ ಜಗತ್**
**ಪರಮಾತ್ಮನ ಇತ್ಯಪಿ ಯಾಃ ಶ್ರುತಯಃ ।**
**ಅವಧಾರ್ಯತ ಆಭಿರಭೇದಮತಿಃ**
**ಪರಮಾತ್ಮ ಸತತ್ತ್ವ ಸಮರ್ಪಣತಃ ॥** ೪೩

ಪರಮಾತ್ಮನಿಂದ ಆಕಾಶವೇ ಮೊದಲಾದ ಜಗತ್ತು ಉತ್ಪನ್ನವಾಯಿತು-ಎಂದು ಶ್ರುತಿವಾಕ್ಯಗಳು ಹೇಳುತ್ತವೆಯಷ್ಟೆ. ಪರಮಾತ್ಮತತ್ತ್ವವೇ ಜಗದ್ರೂಪದಲ್ಲಿ ಅರ್ಪಣವಾಗಿದೆಯೆಂದು ತಿಳಿಸುವುದರ ಮೂಲಕ ಈ ಶ್ರುತಿಗಳಿಂದ ಜೀವಾತ್ಮ ಪರಮಾತ್ಮರ ಅಭೇದ ಬುದ್ಧಿಯೇ ನಿಶ್ಚಿತವಾಗುತ್ತದೆ.

**ವಿವರಣೆ :**

**ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ**-" ಬ್ರಹ್ಮ ವಸ್ತುವಿನಲ್ಲಿಲ್ಲದ ಧರ್ಮವನ್ನು ಅಧ್ಯಾರೋಪಮಾಡಿ ಅದನ್ನು ಅಲ್ಲಗಳೆಯವುದರ ಮೂಲಕ ಪ್ರಪಂಚಾತೀತವಾದ ವಸ್ತುವೇ ವರ್ಣಿಸಲ್ಪಡುತ್ತದೆ "- ಎಂಬ ನ್ಯಾಯವುಂಟು. ಸೃಷ್ಟಿಶ್ರುತಿಗಳಿಗೆ ಪ್ರಪಂಚವು ಬ್ರಹ್ಮದಲ್ಲಿ ಅಧ್ಯಸ್ತವಾಗಿದೆಯೆಂದು ಹೇಳುವುದರಲ್ಲಿ ತಾತ್ಪರ್ಯ. ಇದು ಬ್ರಹ್ಮವಲ್ಲ, ಇದು ಬ್ರಹ್ಮವಲ್ಲ-ಎಂದು ನೇತಿಗಳೆಯವುದೇ ಉದ್ದಿಷ್ಟವಾಗಿರುತ್ತದೆ. **ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕತ್ಯೇವ ಸತ್ಯಂ** (ಛಾಂ. ೬-೧-೪)-ಎಂಬ ಶ್ರುತಿಯು ಈ ಜಗತ್ತೆಲ್ಲ ಅಸತ್ಯವೆಂದೂ ಬ್ರಹ್ಮವೇ ಸತ್ಯವೆಂದೂ ತೋರಿಸಿಕೊಟ್ಟಿದೆ. ಬ್ರಹ್ಮಾತಿರಿಕ್ತ ವಸ್ತುವೇ ಇಲ್ಲವಾದ್ದರಿಂದ ಜೀವವೆಂಬ ಇನ್ನೊಂದು ವಸ್ತುವು ಪರಮಾರ್ಥದಲ್ಲಿ ಇಲ್ಲ-ಎಂದು ತಿಳಿಯಬೇಕು.

**ಯದಿ ಸೃಷ್ಟಿವಿಧಾನಪರಂ ವಚನಂ**
**ಫಲಶೂನ್ಯಮನರ್ಥಕಮೇವ ಭವೇತ್ ।**
**ಜಗದಿತ್ಥಮಜಾಯತ ಧಾತುರಿತಿ**
**ಶ್ರವಣಂ ಪುರುಷಸ್ಯ ಫಲಾಯ ನಹಿ ॥ ೪೪**

ಸೃಷ್ಟಿವಿಧಾನವನ್ನು ಹೇಳುವುದಷ್ಟೇ ಆ ವಾಕ್ಯಗಳ ಉದ್ದೇಶವಾದರೆ, ಅದರಿಂದ ಮುಮುಕ್ಷುವಿಗೆ ಫಲವೇನೂ ಇಲ್ಲದೆ ಆ ಶ್ರುತಿವಾಕ್ಯಗಳು ವ್ಯರ್ಥವೇ ಆದಾವು. 'ಪರಮಾತ್ಮನಿಂದ ಜಗತ್ತು ಈ ಪ್ರಕಾರ ಹುಟ್ಟಿತು' ಎಂಬುದರ ಶ್ರವಣದಿಂದ ಮುಮುಕ್ಷುವಾದ ಮನುಷ್ಯನಿಗೆ ಯಾವ ಪ್ರಯೋಜನವೂ ಇಲ್ಲವಷ್ಟೆ.

**ವಿವರಣೆ** :–ಪರಮಾತ್ಮನಿಂದ ಆಕಾಶ ಹುಟ್ಟಿತು. ಆಕಾಶದಿಂದ ವಾಯ ಜನಿಸಿತು–ಇತ್ಯಾದಿಯಾಗಿ ಸೃಷ್ಟಿಯನ್ನು ಹೇಳತಕ್ಕ ಶ್ರುತಿವಾಕ್ಯಗಳಿಗೆ ಪರಮಾತ್ಮನಿಗಿಂತ ಬೇರೆಯಾಗಿ ಜಗತ್ತು ಇಲ್ಲ ಎಂದು ಹೇಳುವುದರಲ್ಲಿ ತಾತ್ಪರ್ಯವಿದೆ.

ಉಪನಿಷದ್ವಾಕ್ಯಗಳ ಶ್ರವಣದಿಂದ ಬ್ರಹ್ಮಸ್ವರೂಪದ ಜ್ಞಾನವಾಗಿ ಮೋಕ್ಷಕ್ಕೆದಾರಿ ಯಾವುದೆಂಬುದು ತಿಳಿಯಬೇಕು. **'ಬ್ರಹ್ಮವಿದಾಪ್ನೋತಿ ಪರಂ'** (ತೈ. ೨–೧), **'ತರತಿ ಶೋಕಮಾತ್ಮವಿತ್ '** (ಛಾಂ. ೭–೧–೩) ಮುಂತಾದ ವಾಕ್ಯಗಳಿಂದ ಅದು ಸ್ಫುಟವಾಗಿದೆ. ಮುಮುಕ್ಷುವಿಗೆ ಅನಾವಶ್ಯಕವಾದ ವಿಷಯವನ್ನು ಉಪನಿಷತ್ತು ಎಂದಿಗೂ ಬೋಧಿಸುವುದಿಲ್ಲ.

**ಅನೃತತ್ವಮುವಾದ್ಯಸಕೃದ್ವಿಕೃತೇಃ**
**ನಿರಧಾರಿ ಸದೇವ ತು ಸತ್ಯಮಿತಿ ।**
**ಶ್ರುತಿಭಿರ್ಬಹುಧೈತದತೋಽವಗತಂ**
**ಜಗತೋ ನ ಹಿ ಜನ್ಮ ವಿಧೇಯಮಿತಿ ॥ ೪೫**

ಆಕಾಶ, ವಾಯು–ಮುಂತಾದ ವಿಕಾರಿಯಾದ ಜಗತ್ತು ಅನೃತ–ಮಿಥ್ಯೆ ಎಂದು ಶ್ರುತಿಗಳು ಬಹುವಿಧದಲ್ಲಿ ಹೇಳಿರುತ್ತವೆಯಲ್ಲದೆ, ಯಾವುದು ಸದ್ವಸ್ತುವೋ ಅದೇ ಸತ್ಯವೆಂದು ನಿರ್ಧರಿಸಿರುತ್ತವೆ. ಆದ್ದರಿಂದ ಅಸತ್ಯವಾದ ಜಗತ್ತಿನ ಸೃಷ್ಟಿ ವಿಧಾನವನ್ನು ಶ್ರುತಿಗಳು ಹೇಳಬೇಕಾದ್ದಿಲ್ಲವೆಂದು ಗೊತ್ತಾಗುತ್ತದೆ.

ಉಪನಿಷತ್ತುಗಳು ಹೊರಟಿರುವುದು ಸತ್ಯದ ಅನ್ವೇಷಣೆಗಾಗಿ **' ತತ್ ಸತ್ಯಂ ಸ ಆತ್ಮಾ '** ಇತ್ಯಾದಿ ವಚನಗಳಿಂದ ಸತ್ಯವು ಯಾವುದೆಂಬುದನ್ನು ತಿಳಿಸಲಾಗಿದೆ. **'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ '**
(ಛಾಂ ೬–೧–೪) ಮೊದಲಾದ ವಚನಗಳಿಂದ ನಾಮರೂಪಗಳು ಮಿಥ್ಯೆಯೆಂದೂ

ತಿಳಿಸಲಾಗಿದೆ. ಮಿಥ್ಯೆಯಾದ ನಾಮರೂಪಗಳನ್ನು ವಿವರಿಸುವುದು ಶ್ರುತಿತಾತ್ಪರ್ಯವಲ್ಲ.

ನ ಚ ತತ್ತ್ವಮಸೀತ್ಯಸಕೃದ್ವಚನಂ
ಜಗತೋ ಜನಿಮಾತ್ರವಿಧೌ ಘಟತೇ ।
ಪರಮಾತ್ಮಪದಾನುಮತಿಂ ತು ಯದಾ
ಜನಯೇತ್ ಪುರುಷಸ್ಯ ತದಾ ಘಟತೇ ॥ ೪೬

ಛಾಂದೋಗ್ಯದಲ್ಲಿ 'ತತ್ತ್ವಮಸಿ =ಸದ್ಬ್ರಹ್ಮವೇ ನೀನಾಗಿದ್ದೀಯೆ ' ಎಂದು ಅನೇಕ ಸಲ (ಏಳು ಬಾರಿ) ಉಪದೇಶಿಸಲಾಗಿದೆ. ಜಗತ್ತಿನ ಉತ್ಪತ್ತಿ ಮಾತ್ರ ವಿಧಾನವೇ ಉಪನಿಷತ್ತಿನ ತಾತ್ಪರ್ಯವಾಗಿದ್ದರೆ, ಈ ವಚನವು ಕೂಡುತ್ತಿರಲಿಲ್ಲ. ಪರಮಾತ್ಮತತ್ತ್ವದ ಜ್ಞಾನವನ್ನು ಮನುಷ್ಯನಿಗೆ ಅದು ಉಂಟು ಮಾಡುವುದಾದರೆ ಮಾತ್ರ ಕೂಡುತ್ತದೆ.

**ವಿವರಣೆ** :–'ತತ್ತ್ವಮಸಿ ' (ಛಾಂ ೬–೮) ಇತ್ಯಾದಿ ವಾಕ್ಯಗಳು ಜೀವಬ್ರಹ್ಮರಿಗೆ ಅಭೇದವನ್ನು ಬೋಧಿಸುತ್ತವೆ. ಉಪನಿಷದ್ವಾಕ್ಯಗಳಿಗೆ ಇದೇ ಪರಮ ತಾತ್ಪರ್ಯವಾಗಿರುತ್ತದೆ. ಇಲ್ಲದಿದ್ದರೆ ಈ ವಿಷಯವನ್ನು ಮತ್ತೆ ಮತ್ತೆ ಪ್ರತಿಪಾದಿಸಬೇಕಾಗಿರಲಿಲ್ಲ. ಆದ್ದರಿಂದ ಅನೇಕಸಲ ಉಪದೇಶವು ಸಂಗತವಾಗುತ್ತಿರಲಿಲ್ಲ.

ಸ್ಥಿರಜಂಗಮದೇಹಧಿಯಾಂ ಚರಿತಂ
ಪರಿಪಶ್ಯತಿ ಯೋಽವಿಕೃತಃ ಪುರುಷಃ ।
ಪರಮಾತ್ಮಸದುಕ್ತಿರಸಾವಿತಿ ಯತ್
ಭಣಿತಂ ತದತಿಷ್ಠಿಪಮಿತ್ಥಮಹಮ್ ॥ ೪೭

ಸ್ಥಾವರ, ಜಂಗಮ, ದೇಹ, ಬುದ್ಧಿ–ಇವುಗಳ ಕ್ರಿಯೆಯನ್ನು ಯಾವ ಪುರುಷನು ವಿಕಾರರಹಿತನಾಗಿ ಸಾಕ್ಷಿಯಾಗಿ ನೋಡುತ್ತಿರುವನೋ ಆತನೇ ಪರಮಾತ್ಮನೆಂದೂ ಸತ್‌ಪದವಾಚ್ಯನೆಂದೂ ನಾನು ಹಿಂದೆ ಏನು ಹೇಳಿದ್ದೆನೋ ಅದನ್ನು ಈ ಪ್ರಕಾರವಾಗಿ ಸ್ಥಾಪಿಸಿದೆನು.

**ಟಿಪ್ಪಣಿ** : ಆಚಾರ್ಯರು ಈ ಹಿಂದೆ ೩೪ ನೆಯ ಶ್ಲೋಕದಲ್ಲಿ ಮತ್ತು ಅದಕ್ಕೆ ಪೂರ್ವದಲ್ಲಿ ಆತ್ಮನು ದೃಕ್‌ಸ್ವರೂಪನೆಂದೂ, ದೇಹ, ಬುದ್ಧಿ, ಅಹಂಕಾರಾದಿಗಳೆಲ್ಲವೂ ದೃಶ್ಯಗಳೆಂದೂ ತಮ್ಮ ಸಿದ್ಧಾಂತವನ್ನು ಮಂಡಿಸಿದ್ದಾರೆ. ಅದನ್ನು ಸಪ್ರಮಾಣವಾಗಿ ಸ್ಥಾಪಿಸಲಾಯಿತೆಂದು ಈ ಶ್ಲೋಕದಲ್ಲಿ ಉಪಸಂಹಾರಮಾಡಿದ್ದಾರೆ.

ಜೀವ–ಬ್ರಹ್ಮರಿಗೆ ಭೇದವನ್ನು ಹೇಳುವುದು ಯುಕ್ತವಲ್ಲ–

**ಪೃಥಗೇವ ಯದ್ಯಾಕ್ಷರತೋ ಮತಿವಿತ್**
**ಮಕರೋದಕವನ್ನ ಘಟಾಂಬರವತ್ ।**
**ನ ವಿರೋತ್ಸ್ಯತಿ ತತ್ತ್ವಮಸೀತಿ ತದಾ**
**ವಚನಂ ಕಥಮೇಷ ತ ಇತ್ಯಪಿ ಚ ॥** ೪೮

ಅಕ್ಷರವಾದ ಬ್ರಹ್ಮವಸ್ತುವಿಗಿಂತ ಬುದ್ಧಿಸಾಕ್ಷಿಯಾದ ಆತ್ಮನು ಮೀನು-ಜಲಗಳಂತೆ ಬೇರೆ ಬೇರೆಯೇ ಸರಿ ಎಂದೂ, ಮಹಾಕಾಶ-ಘಟಾಕಾಶಗಳಂತೆ ಅಭಿನ್ನನಲ್ಲವೆಂದೂ ಹೇಳುವುದಾದರೆ, ಆ ಪಕ್ಷದಲ್ಲಿ ' **ತತ್ತ್ವಮಸಿ** ' ' **ಏಷ ತೇ ಆತ್ಮಾ** ' ಇತ್ಯಾದಿ ವಚನಗಳಿಗೆ ಅದು ಹೇಗೆ ತಾನೆ ವಿರುದ್ಧವಾಗದೆ ಇದ್ದೀತು?

**ವಿವರಣೆ** :-ನೀರಿನಲ್ಲಿರುವ ಮೀನು ನೀರಿಗಿಂತ ಬೇರೆಯೇ ಸರಿ. ಮೀನು ನೀರಿನ ಆಶ್ರಯದಲ್ಲಿರುತ್ತದೆ. ಹಾಗೆ ಜೀವನೂ ಪರಮಾತ್ಮನೂ ಭಿನ್ನರೇ. ಪರಮಾತ್ಮನ ಆಶ್ರಯದಲ್ಲಿ ಜೀವನಿರುತ್ತಾನೆ-ಎಂಬ ದ್ವೈತಪಕ್ಷವು ಯಕ್ತವಾದ್ದಲ್ಲ. ಮಹಾಕಾಶ -ಘಟಾಕಾಶಗಳಂತೆ ಪರಮಾತ್ಮ - ಜೀವಾತ್ಮರು ಅಭಿನ್ನರೇ ಸರಿ. ಈ ಸಿದ್ಧಾಂತವನ್ನೊಪ್ಪದೇ ಹೋದರೆ ' **ತತ್ತ್ವಮಸಿ, ಏಷ ತೇ ಆತ್ಮಾ** ' ಇತ್ಯಾದಿ ಶ್ರುತಿವಾಕ್ಯಗಳಿಗೆ ವಿರೋಧ ಉಂಟಾಗುತ್ತದೆ.

**ಟಿಪ್ಪಣಿ** :-ಮೇಲ್ಕಂಡ ಶ್ಲೋಕದ ಕಡೆಯ ಸಾಲಿನಲ್ಲಿ ' **ಏಷ ತೇ** ' ಎಂದು ಪದ ವಿಭಾಗ ಮಾಡಿಕೊಳ್ಳಬೇಕು.

ಜೀವಬ್ರಹ್ಮರಿಗೆ ಭೇದವನ್ನೊಪ್ಪಿದರೆ ಅಭೇದಶ್ರುತಿಗೆ ವಿರೋಧ ಬರುವುದಿಲ್ಲವೆಂದು ಪೂರ್ವಪಕ್ಷಿ ಹೇಳುತ್ತಾನೆ-

**ನ ತು ವಸ್ತುಸತತ್ತ್ವವಿಬೋಧನಕೃತ್**
**ವಿನಿವರ್ತಯದಪ್ರತಿಬೋಧಮಿದಮ್ ।**
**ಸದುಪಾಸನಕರ್ಮವಿಧಾನಪರಂ**
**ಯತ ಏವಮತೋ ನ ವಿರೋತ್ಸ್ಯತಿ ಮೇ ॥** ೪೯

' **ತತ್ತ್ವಮಸಿ** ' ಇತ್ಯಾದಿ ವಾಕ್ಯವು ಜೀವಾತ್ಮನ ಅಜ್ಞಾನವನ್ನು ಹೋಗಲಾಡಿಸುತ್ತ ಆತನ ಪರಮಾರ್ಥ ತತ್ತ್ವವನ್ನು ತಿಳಿಸಿಕೊಡುತ್ತದೆಯೆಂಬ ನಿನ್ನ (ಸಿದ್ಧಾಂತಿಯ) ಪಕ್ಷವನ್ನು ನಾನು ಒಪ್ಪುವುದಿಲ್ಲ. ಮತ್ತೇನೆಂದರೆ, ಅಭೇದ ಶ್ರುತಿಯು ಬ್ರಹ್ಮೋಪಾಸನೆಯೆಂಬ ಕರ್ಮವನ್ನು ವಿಧಿಸುವುದಕ್ಕಾಗಿ ಹೊರಟಿದೆ ಎಂದು ನನ್ನ ಹೇಳಿಕೆ. ಆದ್ದರಿಂದ ನನಗೆ (ದ್ವೈತಿಗೆ) ಅಭೇದಶ್ರುತಿಯ ವಿರುದ್ಧವಾಗುವುದಿಲ್ಲ.

ಉಪಾಸಕನಿಗೂ ಉಪಾಸ್ಯ ವಸ್ತುವಿಗೂ ಭೇದವಿದ್ದೇ ಇರಬೇಕು. ಶ್ರುತಿಯಲ್ಲಿ ಸಾಧಕನಿಗಾಗಿ ಹಲವು ಬಗೆಯ ಉಪಾಸನೆಗಳನ್ನು ವಿಧಿಸಲಾಗಿದೆ. ಅಭೇದ ಶ್ರುತಿಯೂ ಉಪಾಸನೆಯನ್ನು ವಿಧಿಸುತ್ತದೆಯೆಂದು ಒಪ್ಪಿದಾಗ ದ್ವೈತಪಕ್ಷದಲ್ಲಿ ವಿರೋಧ ಬರುವುದಿಲ್ಲ–ಎಂದು ಅಭಿಪ್ರಾಯ.

ಅದು ಉಪಾಸನಾವಿಧಿ ಹೇಗೆ ? ಎಂಬುದನ್ನು ಈಗ ವಿವರಿಸುತ್ತಾನೆ–

**ಮನಆದಿಷು ಕಾರಣದೃಷ್ಟಿವಿಧಿಃ**
**ಪ್ರತಿಮಾಸು ಚ ದೇವಧಿಯಾಂ ಕರಣಮ್ ।**
**ಸ್ವಮತಿಂ ಹ್ಯನಪೋಹ್ಯ ಯಥಾ ತು ತಥಾ**
**ತ್ವಮಸೀಹ ಸದಾತ್ಮಮತಿರ್ವಚನಾತ್ ॥ ೫೦**

ಮನಸ್ಸು ಮೊದಲಾದವುಗಳಲ್ಲಿ ಅದಕ್ಕೆ ಕಾರಣವಾದ ಬ್ರಹ್ಮದ ದೃಷ್ಟಿಯನ್ನಿಟ್ಟು ಉಪಾಸನೆ ಮಾಡಬೇಕೆಂದು ವಿಧಿಯಂಟು. ಹಾಗೆಯೇ ಸಾಲಿಗ್ರಾಮಾದಿ ಪ್ರತೀಕಗಳಲ್ಲಿ ನಾರಾಯಣಾದಿ ದೇವದೃಷ್ಟಿಯನ್ನಿಟ್ಟು ಉಪಾಸನೆ ಮಾಡಬೇಕೆಂದು ವಿಧಿಯಂಟು. ಅಂತಹ ಉಪಾಸನೆಗಳಲ್ಲಿ ಉಪಾಸಕನಾದ ತಾನು ಭಿನ್ನನೆಂಬ ಬುದ್ಧಿಯೇನೂ ಹೋಗತಕ್ಕದ್ದಲ್ಲ. ಅದರಂತೆಯೇ ' **ತತ್ತ್ವಮಸಿ** ' ಎಂಬುದೂ ಉಪಾಸನಾ ವಿಧಿಯಾಗಬಹುದು. ಆ ವಚನಬಲದಿಂದ ತನ್ನನ್ನೆ ಸದಾತ್ಮನೆಂದು ಉಪಾಸನೆಮಾಡ ಬೇಕಾಗಿ ವಿಧಿಸಿರುತ್ತದೆ.

' **ಮನೋ ಬ್ರಹ್ಮೇತ್ಯುಪಾಸೀತ** ' (ಛಾಂ. ೩–೧೮–೧)–ಇತ್ಯಾದಿ ವಾಕ್ಯಗಳು ಉಪಾಸನೆಯನ್ನು ವಿಧಿಸಿವೆ. ಮನಸ್ಸಿಗೆ ಕಾರಣವಾದದ್ದು ಬ್ರಹ್ಮ. ಹಾಗೆಯೇ ಪ್ರತಿಮೆಗಳನ್ನು ದೇವತೆಗಳೆಂದು ತಿಳಿದು ಉಪಾಸನೆ ಮಾಡಬೇಕೆಂದು ಶಾಸ್ತ್ರವು ಹೇಳುತ್ತದೆ. ಇಷ್ಟು ಮಾತ್ರದಿಂದ ಮನಸ್ಸು ಬ್ರಹ್ಮವಾಗುವುದಿಲ್ಲ. ಪ್ರತಿಮೆಗಳು ದೇವತೆಗಳಾಗುವುದೂ ಇಲ್ಲ. ಆ ರೀತಿ ಅಭೇದವನ್ನು ಬೋಧಿಸುವುದು ಶಾಸ್ತ್ರದ ಉದ್ದೇಶವೂ ಅಲ್ಲ. ಅಂತಯೇ ಅಭೇದ ಬೋಧಕ ಶ್ರುತಿಗಳೂ ಸಹ ಉಪಾಸಕನು ತನ್ನ ಆತ್ಮವನ್ನು ಬ್ರಹ್ಮವೆಂದು ತಿಳಿದು ಉಪಾಸನೆ ಮಾಡಬೇಕು–ಎಂದು ಅವುಗಳ ತಾತ್ಪರ್ಯವಾಗಬಹುದು. ಇಷ್ಟು ಮಾತ್ರದಿಂದ ಜೀವನಿಗೂ ಬ್ರಹ್ಮಕ್ಕೂ ಅಭೇದ ಸಿದ್ಧಿಸುವುದಿಲ್ಲ–ಎಂದು ಪೂರ್ವಪಕ್ಷ. ಅಲ್ಲದೆ ಗೌಣಾರ್ಥದಲ್ಲಿ ಅಭೇದವನ್ನು ಶ್ರುತಿಯು ಹೇಳಿದೆ ಎಂದೂ ತಿಳಿಯಬಹುದು–

ಅಥವಾ ತ್ವಮಿತಿ ಧ್ವನಿವಾಚ್ಯಮಿದಂ
ಸದಸೀತಿ ವದೇದ್ವಚನಂ ಗುಣತಃ ।
ವಿಭಯಂ ಪುರುಷಂ ಪ್ರವದಂತಿ ಯಥಾ
ಮೃಗರಾಡಯಮೀಶ್ವರಗುಪ್ತ ಇತಿ ॥ ೫೧

ಅಥವಾ ' ತತ್ತ್ವಮಸಿ ' ಎಂಬ ವಚನವು 'ನೀನು ಸದ್ರೂಪಬ್ರಹ್ಮವಾಗಿದ್ದಿಯೆ' ಎಂಬುದಾಗಿ ' ತ್ವಂ 'ಪದವಾಚ್ಯನಾದ ಜೀವನನ್ನು ಕುರಿತು ಗುಣನಿಮಿತ್ತವಾಗಿ ಗೌಣೀವೃತ್ತಿಯಿಂದ ಹೇಳಿರಬಹುದು. ಹೇಗೆಂದರೆ, ನಿರ್ಭಯನಾದ ಒಬ್ಬ ಪುರುಷನನ್ನು ನೋಡಿ ' ಈಶ್ವರಗುಪ್ತನು ಸಿಂಹವೇ ಸರಿ ' ಎಂದು ಹೇಳುತ್ತಾರಲ್ಲವೇ? ಹಾಗೆಯೇ ಇದು.

ಜೀವನು ಬ್ರಹ್ಮದಂತೆ ನಿತ್ಯನೂ, ಚೇತನನೂ, ಆನಂದಮಯನೂ, ಆಗಿದ್ದಾನೆಂಬ ಅಭಿಪ್ರಾಯದಿಂದ ಜೀವನು ಬ್ರಹ್ಮವೇ ಎಂದು ಅಭೇದಶ್ರುತಿ ಹೇಳಿದೆ. ಇದು ಗೌಣ ಪ್ರಯೋಗ, 'ನೀನು ಸಿಂಹವೇ' ಎಂದು ಹೇಳಿದ ಮಾತ್ರದಿಂದ ಈಶ್ವರಗುಪ್ತನು ಹೇಗೆ ಸಿಂಹವಾಗುವುದಿಲ್ಲವೋ ಹಾಗೆ ಜೀವನೂ ಬ್ರಹ್ಮವಾಗಿರುವುದಿಲ್ಲ–ಎಂದು ಪೂರ್ವಪಕ್ಷ.

ಅಥವಾ ಅಭೇದಶ್ರುತಿಯ ಸ್ತುತಿಪರವಾದ ಅರ್ಥವಾದವಾಗಿರಬಹುದು–

ಯದಿ ವಾ ಸ್ತುತಯೇ ಸದಸೀತಿ ವದೇತ್
ಮಘವಾನಸಿ ವಿಷ್ಣುರಸೀತಿ ಯಥಾ ।
ತ್ವಮಿತಿ ಶ್ರುತಿವಾಚ್ಯಸತತ್ತ್ವಕತಾಂ
ಅಥವಾ ಸತ ಏವ ವದೇದ್ವಚನಮ್ ॥ ೫೨

ಹೀಗೆಯೂ ಹೇಳಬಹುದು–ನೀನು ಇಂದ್ರ, ನೀನು ವಿಷ್ಣು–ಎಂಬುದಾಗಿ ಒಬ್ಬ ದಾನಿಯನ್ನು ಹೊಗಳುವುದಕ್ಕಾಗಿ ಜನರು ಹೇಳುವಂತೆ ಜೀವನು ಸದ್ರೂಪನೆಂದು ಸ್ತುತಿಗಾಗಿ ಹೇಳಿದ ಅರ್ಥವಾದವು ಮಾತ್ರ ಈ ಶ್ರುತಿಯಾಗಿದ್ದು ಬ್ರಹ್ಮಸಾದೃಶ್ಯವನ್ನು ಜೀವನಿಗೆ ಹೇಳಿರಬಹುದು ಅಥವಾ ಸದ್ರೂಪವಾದ ಬ್ರಹ್ಮವೇ ನೀನು ಎಂದು ವಿಪರೀತಾರ್ಥವೂ ಆ ವಾಕ್ಯಕ್ಕೆ ಆಗಬಹುದು ಎಂದು ಪೂರ್ವಪಕ್ಷ.

ಹಿಂದಿನ ಶ್ಲೋಕದಲ್ಲಿ ಗೌಣವಾಗಿ ಅಭೇದವಚನವೆಂದು ತಿಳಿಸಿದೆ. ಸ್ತುತಿಪರವಾಗಿ ಅರ್ಥಮಾಡಿದರೂ ಅದು ಗೌಣಪ್ರಯೋಗವೇ ಆಗುತ್ತದೆ. ಆದರೆ ಅರ್ಥವಾದದಲ್ಲಿ ಸ್ತುತಿಯು ವಿವಕ್ಷಿತವೆಂಬುದಷ್ಟೇ ಭೇದ. ಬ್ರಹ್ಮವೇ ನೀನು ಎಂದು ವಿಪರೀತಾರ್ಥ ಹೇಳಿದರೂ ಜೀವಬ್ರಹ್ಮರಿಗೆ ಅಭೇದವೇ ಸಿದ್ಧವಾಗುತ್ತದೆಯೆಂಬ ಶಂಕೆ ಹುಟ್ಟಬಹುದು.

ಆದರೆ ಆ ಪಕ್ಷದಲ್ಲಿ ಬ್ರಹ್ಮವನ್ನು ಜೀವದ ಕೆಳಮಟ್ಟಕ್ಕೆ ಇಳಿಸಿದಂತಾಗುತ್ತದೆ. ಜೀವನು ಪರಮಾರ್ಥವಾಗಿ ಸಚ್ಚಿದಾನಂದ ಸ್ವರೂಪನೆಂದು ತಿಳಿಸಿ ಕೊಟ್ಟಂತಾಗುವುದಿಲ್ಲ.

ಮತ್ತು ಜೀವ-ಬ್ರಹ್ಮರಿಗೆ ಅಭೇದವನ್ನು ಬೋಧಿಸಿದರೆ ಈ ಉಪದೇಶವೇ ವ್ಯರ್ಥವಾದೀತೆಂದು ಪೂರ್ವಪಕ್ಷಿಯ ಶಂಕೆ-

**ಯದಿ ತತ್ತ್ವಮಿತಿ ಧ್ವನಿನಾಭಿಹಿತಃ**
**ಪರಮಾತ್ಮಸತತ್ತ್ವ ಏವ ಸದಾ ।**
**ಕಿಮಿತಿ ಸ್ವಕಮೇವ ನ ರೂಪಮವೇತ್**
**ಪ್ರತಿಬೋಧ್ಯತ ಏವ ಯತೋ ವಚನೈಃ ॥ ೫೩**

ಆ ಬ್ರಹ್ಮವಸ್ತುವೇ ನೀನು-ಎಂದು ಉಕ್ತನಾದ ಜೀವನು ಸದಾ ಪರಮಾತ್ಮ ಸ್ವರೂಪನೇ ಆಗಿದ್ದಲ್ಲಿ, ಅವನಿಗೆ ತನ್ನ ಸ್ವರೂಪವೇ ತಿಳಿಯದೇ ಹೋದದ್ದು ಹೇಗೆ? ತಿಳಿಯದೇ ಇದ್ದುದರಿಂದಲೇ ಅಲ್ಲವೇ ಶ್ರುತಿವಾಕ್ಯಗಳಿಂದ ಆ ರೀತಿ ಅವನಿಗೆ ತಿಳಿಸಿ ಕೊಡಬೇಕಾಗಿ ಬಂದಿತು ?

ಜೀವನು ಪರಮಾತ್ಮನೇ ಆಗಿದ್ದಲ್ಲಿ ಅದು ಅವನಿಗೆ ಗೊತ್ತಿರಲೇಬೇಕು! ತನ್ನ ಸ್ವರೂಪವೇನೆಂಬುದು ಸರ್ವರಿಗೂ ಪ್ರತ್ಯಕ್ಷವಾಗಿರುತ್ತದೆ! ಆದ್ದರಿಂದ 'ನೀನು ಬ್ರಹ್ಮವೇ ಆಗಿದ್ದೀಯೆ' ಎಂಬ ಉಪದೇಶದ ವ್ಯರ್ಥವಾದೀತು! ಎಂದು ಪೂರ್ವಪಕ್ಷ.

ಪೂರ್ವಪಕ್ಷದ ಉಪಸಂಹಾರ-

**ಅತ ಏವ ಹಿ ಜೀವಸದಾತ್ಮಕತಾಂ**
**ನ ಹಿ ತತ್ತ್ವಮಸೀತಿ ವದೇದ್ವಚನಮ್ ।**
**ಯದಪೀದೃಶಮನ್ಯದತೋ ವಚನಂ**
**ತದಪಿ ಪ್ರಥಯೇದನಯೈವ ದಿಶಾ ॥ ೫೪**

ಈ ಪೂರ್ವೋಕ್ತ ಕಾರಣಗಳಿಂದ ' ತತ್ತ್ವಮಸಿ ' ಎಂಬ ವಾಕ್ಯವು ಜೀವಕ್ಕೆ ಪರಬ್ರಹ್ಮಸ್ವರೂಪತೆಯನ್ನು ಬೋಧಿಸುವುದಿಲ್ಲವೆಂದು ಹೇಳಬಹುದಾಗಿದೆ. ಇದಲ್ಲದೆ ಅಭೇದ ಬೋಧಕವೆಂದು ಸಮ್ಮತವಾದ ಎಲ್ಲ ಶ್ರುತಿವಾಕ್ಯವನ್ನೂ ಇದೇ ರೀತಿಯಲ್ಲಿ ಅನ್ಯಥಾ ವ್ಯಾಖ್ಯಾನಿಸಬಹುದಾಗಿದೆ.

' ತತ್ತ್ವಮಸಿ ' ಎಂಬ ಮಹಾವಾಕ್ಯವು ಅಭೇದವನ್ನು ತಿಳಿಸುವುದಿಲ್ಲವೆಂದೂ, ಜೀವಾತ್ಮನಲ್ಲಿ ಬ್ರಹ್ಮದೃಷ್ಟಿಯನ್ನಿಟ್ಟು ಬ್ರಹ್ಮದ ಉಪಾಸನೆಯನ್ನು ಅದು ವಿಧಿಸುತ್ತದೆ ಎಂದೂ ಪೂರ್ವಪಕ್ಷಿಯ ಅಭಿಪ್ರಾಯವಾಗಿದೆ. ಈ ಬಗೆಯಲ್ಲಿಯೇ ಅಭೇದ

ಬೋಧಕವೆನ್ನುವ ಇತರ ವಾಕ್ಯಗಳಿಗೂ ಅರ್ಥ ಹೇಳಬಹುದಾಗಿದೆಯಾದ್ದರಿಂದ ಅದ್ವೈತವು ಶ್ರುತಿಸಮ್ಮತವಲ್ಲವೆಂದು ಆತನ ಆಶಯ.

ಈಗ ಆಚಾರ್ಯರು ಸಿದ್ಧಾಂತವನ್ನು ನಿರೂಪಿಸುತ್ತಾರೆ–

**ತ್ವದುದಾಹೃತವಾಕ್ಯವಿಲಕ್ಷಣತಾ**
**ವಚನಸ್ಯ ಹಿ ತತ್ತ್ವಮಸೀತಿ ಯತಃ ।**
**ಅತ ಏವ ನ ದೃಷ್ಟಿವಿಧಾನಪರಂ**
**ಸತ ಏವ ಸದಾತ್ಮಕತಾಗಮಕಮ್ ॥ ೫೫**

ಎಲೈ ಪೂರ್ವಪಕ್ಷಿಯೆ, ನೀನು ಉದಾಹರಿಸಿದ ಉಪಾಸನಾವಾಕ್ಯಕ್ಕೂ ' **ತತ್ತ್ವಮಸಿ** ' ಎಂಬ ಮಹಾವಾಕ್ಯಕ್ಕೂ ಬಹಳ ವ್ಯತ್ಯಾಸವಿದೆ. ಆದ್ದರಿಂದ ಈ ಮಹಾವಾಕ್ಯವು ಬ್ರಹ್ಮದೃಷ್ಟಿಯನ್ನಿಟ್ಟು, ಉಪಾಸನೆ ಮಾಡಬೇಕೆಂದು ವಿಧಿಸುವಂತ ಹದಲ್ಲ. ಮತ್ತೇನೆಂದರೆ, ಇದು ಸದ್ವಸ್ತುವಿಗೇ ತನ್ನ ಸತ್‌ಸ್ವರೂಪವನ್ನು ತಿಳಿಸತಕ್ಕದ್ದಾಗಿದೆ.

' **ಮನೋ ಬ್ರಹ್ಮೇತ್ಯುಪಾಸೀತ** ' ಎಂಬ ವಾಕ್ಯಕ್ಕಿಂತ ' **ತತ್ತ್ವಮಸಿ** ' ಎಂಬ ವಾಕ್ಯವು ವಿಲಕ್ಷಣವಾಗಿದೆ. ಆದ್ದರಿಂದ ಇದು ಉಪಾಸನಾವಿಧಿಪರವಲ್ಲವೆಂದು ದೃಢವಾಗಿ ಹೇಳಬಹುದು. ವಿಲಕ್ಷಣತೆ ಏನೆಂಬುದನ್ನು ಮುಂದಿನ ಶ್ಲೋಕಗಳಲ್ಲಿ ತೋರಿಸಿಕೊಡಲಾಗುವುದು.

**ಇತಿ ಶಬ್ದಶಿರಸ್ಕಪದೋಕ್ತಮತಿಃ**
**ವಿಹಿತಾ ಮನ ಆದಿಷು ತೈರ್ವಚನೈಃ ।**
**ನ ವಿಧಾನಮಿಹಾಸ್ತಿ ತಥಾ ವಚನೇ**
**ಸುವಿಲಕ್ಷಣಮೇತದತೋ ವಚನಾತ್ ॥ ೫೬**

' **ಮನೋ ಬ್ರಹ್ಮೇತ್ಯುಪಾಸೀತ** ' ಇತ್ಯಾದಿ ವಚನಗಳಲ್ಲಿ ' ಬ್ರಹ್ಮ ' ಮುಂತಾದ ಶಬ್ದಗಳ ಮುಂದೆ ' ಇತಿ ' ಎಂಬ ಶಬ್ದವಿದೆ. ಆದ್ದರಿಂದ ಮನಸ್ಸೇ ಮುಂತಾದವುಗಳಲ್ಲಿ ' ಬ್ರಹ್ಮ ' ಎಂಬ ಬುದ್ಧಿಯನ್ನಿಡಬೇಕೆಂದು ಆ ವಚನಗಳಿಂದ ವಿಹಿತವಾಗಿರುತ್ತದೆ. ಆ ಪ್ರಕಾರವಾಗಿ ' **ತತ್ತ್ವಮಸಿ** ' ಎಂಬ ವಾಕ್ಯದಲ್ಲಿ ಇತಿ ಶಬ್ದವಿಲ್ಲ. ಆದ್ದರಿಂದ ಉಪಾಸನಾವಾಕ್ಯಕ್ಕೂ ಈ ವಾಕ್ಯಕ್ಕೂ ಮಹತ್ತರವಾದ ವ್ಯತ್ಯಾಸವಿದೆಯೆಂಬುದು ಗೊತ್ತಾಗುತ್ತದೆ.

**ಟಿಪ್ಪಣಿ :–"ಮನೋ ಬ್ರಹ್ಮೇತ್ಯುಪಾಸೀತ "** ಎಂಬ ವಾಕ್ಯದಲ್ಲಿ ಇತಿಶಬ್ದವಿರುವುದರಿಂದ ಮನಸ್ಸು ಬ್ರಹ್ಮವಲ್ಲದಿದ್ದರೂ ಬ್ರಹ್ಮಬುದ್ಧಿಯನ್ನಿಟ್ಟು ಉಪಾಸನೆ

ಮಾಡಬೇಕೆಂದು ಹೇಳಿರುವುದು ಸ್ಪಷ್ಟ. " **ಉಪಾಸೀತ** " ಎಂಬ ಮಾತು ಸಹ ಅಲ್ಲಿದೆ. " **ತತ್ತ್ವಮಸಿ** " ಎಂಬ ವಾಕ್ಯದಲ್ಲಿಯಾದರೋ ಇತಿ ಶಬ್ದವೂ ಇಲ್ಲ, ಉಪಾಸನಾವಿಧಿಯೂ ಇಲ್ಲ. ಆದ್ದರಿಂದ ಇದು ವಸ್ತುಕಥನವೇ ಹೊರತು ಉಪಾಸನಾವಿಧಿಯಲ್ಲ.

**ಮನಸೋ ವಿಯತಃ ಸವಿತೃಪ್ರಭೃತೇಃ**
**ಪ್ರವದಂತಿ ನ ತಾನಿ ಸದಾತ್ಮಕತಾಮ್ ।**
**ಮನ ಆದಿ ಹಿ ಮುಖ್ಯಮುಪಾಸ್ಯತಯಾ**
**ಪ್ರವದಂತಿ ಯತೋಽಕ್ಷರದೃಷ್ಟಿಯುತಮ್ ॥** ೫೭

ಮನಸ್ಸು, ಆಕಾಶ, ಆದಿತ್ಯ-ಮುಂತಾದವು ಸತ್ (ಬ್ರಹ್ಮ) ಸ್ವರೂಪಗಳೆಂದು ಆ ಉಪಾಸನಾವಚನಗಳು ಹೇಳುವುದಿಲ್ಲ. ಏಕೆಂದರೆ, ಮನಸ್ಸು-ಮೊದಲಾದುವೇ ಮುಖ್ಯವಾಗಿ ಉಪಾಸ್ಯವೆಂದೂ ಅವುಗಳಲ್ಲಿ ಅಕ್ಷರವಾದ ಸತ್ತಿನ (ಬ್ರಹ್ಮದ) ದೃಷ್ಟಿಯನ್ನಿಡಬೇಕೆಂದೂ ಅವು ಹೇಳುತ್ತಿವೆ.

ತಾತ್ಪರ್ಯವೇನೆಂದರೆ, ಸಾಲಿಗ್ರಾಮವನ್ನು ವಿಷ್ಣುವೆಂದು ತಿಳಿದು ಪೂಜಿಸುವಂತೆ ಮನಸ್ಸು-ಮೊದಲಾದವುಗಳಲ್ಲಿ ಬ್ರಹ್ಮದೃಷ್ಟಿಯನ್ನಿಡಬೇಕೆಂದು ಈ ಉಪಾಸನಾವಾಕ್ಯಗಳು ಹೇಳುತ್ತವೆ. ಸಾಲಿಗ್ರಾಮವೇ ಹೇಗೆ ವಿಷ್ಣುವಲ್ಲವೋ ಹಾಗೆ ಮನಸ್ಸು ಬ್ರಹ್ಮವೂ ಅಲ್ಲ. ' **ತತ್ತ್ವಮಸಿ** ' ಎಂಬ ವಾಕ್ಯವಾದರೋ ಹಾಗೆ ಉಪಾಸನೆಯನ್ನು ಹೇಳದೆ, ' ನೀನು ಸತ್ ಆಗಿರುವೆ ' ಎಂದು ಯಥಾರ್ಥವನ್ನು ಬೋಧಿಸುತ್ತದೆ.

**ಕರಕೋ ನ ಮೃದಃ ಪೃಥಗಸ್ತಿ ಯಥಾ**
**ಮನ ಆದಿ ಸತೋಽಸ್ತಿ ತಥಾ ನ ಪೃಥಕ್ ।**
**ಇತಿ ವಸ್ತುಸತತ್ತ್ವಕತಾ ತು ಯದಾ**
**ವಿಧಿಶಬ್ದ ಇತಿಶ್ಚ ತದಾ ತು ವೃಥಾ ॥** ೫೮

ಗಡಿಗೆ ಮಣ್ಣಿಗಿಂತ ಹೇಗೆ ಪ್ರತ್ಯೇಕವಾಗಿಲ್ಲವೋ ಹಾಗೆ ಮನಸ್ಸು-ಮೊದಲಾದದ್ದು ಸತ್ತಿಗಿಂತ ಬೇರೆಯಾಗಿಲ್ಲವೆಂದು ವಸ್ತು ತತ್ತ್ವಕಥನವೇ ಉಪಾಸನಾವಾಕ್ಯದ ತಿರುಳಾದರೆ, ಆ ಪಕ್ಷದಲ್ಲಿ ವಿಧಿಯನ್ನು ಬೋಧಿಸುವ ' **ಉಪಾಸೀತ** ' ಎಂಬ ಶಬ್ದವೂ **ಇತಿ** ಶಬ್ದವೂ ವ್ಯರ್ಥವೇ ಆದೀತು.

ವಸ್ತುಸ್ಥಿತಿಯನ್ನು ಹೇಳುವಾಗ ' ಗಡಿಗೆ ಮಣ್ಣೇ ಸರಿ ' ಎಂದು ಹೇಳುತ್ತಾರೆಯೇ ಹೊರತು ' ಗಡಿಗೆಯನ್ನು ಮಣ್ಣೆಂದು ಭಾವಿಸಬೇಕು ' ಎಂದು ಯಾರೂ ಹೇಳುವುದಿಲ್ಲ. ಹಾಗೆಯೇ ಮನಸ್ಸು ಬ್ರಹ್ಮವೇ ಆಗಿದ್ದರೆ ' ಮನೋ ಬ್ರಹ್ಮಾಸ್ಮಿ '

ಎಂದು ಹೇಳಬೇಕಾಗಿತ್ತು. ' ಬ್ರಹ್ಮೇತ್ಯುಪಾಸೀತ ' ಎಂದು ಹೇಳಬೇಕಾಗಿರಲಿಲ್ಲ. ಆದ್ದರಿಂದ ಉಪಾಸನಾವಾಕ್ಯವು ತತ್ತ್ವಕಥನಕ್ಕಾಗಿ ಹೊರಟಿಲ್ಲ.

ಮನ ಆದಿಸಮಾನವಿಭಕ್ತಿತಯಾ
ವಿಧಿಶಬ್ದಮಿತಿಂ ಚ ವಿಹಾಯ ಯದಿ ।
ಜನಕೇನ ಸತಾ ಸಹಯೋಗಮಿಯಾತ್
ಅನೃತಂ ತದಿತಿ ಸ್ಫುಟಮುಕ್ತಮಭೂತ್ ॥ ೫೯

ಒಂದು ವೇಳೆ ಉಪಾಸನಾವಾಕ್ಯದಲ್ಲಿ ' ಉಪಾಸೀತ ' ಎಂಬ ವಿಧಿಶಬ್ದವೂ ಇತಿ ಶಬ್ದವೂ ಇಲ್ಲದೆ ಹೋಗಿದ್ದರೆ ' ಮನೋ ಬ್ರಹ್ಮ ' ಎಂದು ವಾಕ್ಯವಾಗುತ್ತಿತ್ತು. ಆಗ ಆವೆರಡು ಶಬ್ದಗಳೂ ಒಂದೇ ವಿಭಕ್ತಿಯನ್ನು ಪಡೆದಿರುತ್ತವೆಯಾದ್ದರಿಂದ, ಮನಸ್ಸು ತನ್ನ ಜನಕವಾದ ಬ್ರಹ್ಮದೊಡನೆ ಸಾಮಾನಾಧಿಕರಣ್ಯವನ್ನು ಪಡೆದಿರುತ್ತದೆ. ಆಗ ಮನಸ್ಸೆಂಬುದು ಅನೃತ, ಅದು ವಸ್ತುತಃ ಬ್ರಹ್ಮವೇ ಎಂದು ಹೇಳಿದಂತಾಗುತ್ತಿತ್ತು.

ಉಪಾಸನಾವಾಕ್ಯದಲ್ಲಿ 'ಉಪಾಸೀತ' 'ಇತಿ' ಎಂಬ ಎರಡು ಶಬ್ದಗಳಿರುವುದ ರಿಂದ ಅದು ಉಪಾಸನಾಪರವೇ ಹೊರತು ಅಭೇದಪರವಲ್ಲ–ಎಂದು ಸಿದ್ಧಾಂತಿ ಹೇಳಿದ್ದಾನೆ. ಒಂದು ವೇಳೆ ಆ ಎರಡುಶಬ್ದಗಳಿಲ್ಲದಿದ್ದರೂ ದೋಷ ಬರುತ್ತಿರಲಿಲ್ಲ ವೆಂದು ಸಿದ್ಧಾಂತಿ ಹೇಳುತ್ತಾನೆ. " ಮನೋಬ್ರಹ್ಮ " ಎಂದು ವಾಕ್ಯವಿದ್ದರೆ ಅದರ ಅರ್ಥ ಏನಾದೀತು ? ಮನಸ್ಸಿಗೆ ಬ್ರಹ್ಮವು ಕಾರಣ–ಜನಕ. ಮನಸ್ಸು ಕಾರ್ಯ–ಜನ್ಯ. ಕಾರ್ಯ–ಕಾರಣಗಳನ್ನು ಅಭೇದದಿಂದ ಹೇಳಿದಾಗ ಕಾರ್ಯವು ಅನೃತವೆಂದೂ ಕಾರಣವೇ ಸತ್ಯವೆಂದೂ ಅಭಿಪ್ರಾಯವಾಗುತ್ತದೆ. ಘಟೋ ಮೃತ್ತಿಕಾ, ಕುಂಡಲಂ ಸುವರ್ಣಂ ಎಂಬಲ್ಲಿ ಹಾಗೆಯೇ ಅರ್ಥವೆಂದು ಲೋಕಸಿದ್ಧವಾಗಿದೆ. ಏವಂಚ 'ಮನೋಬ್ರಹ್ಮ' ಎಂಬ ವಾಕ್ಯಕ್ಕೆ ' ಮನಸ್ಸು ಮಿಥ್ಯಾ, ಬ್ರಹ್ಮವೇ ಸತ್ಯ ' ಎಂದು ಅರ್ಥವಾದೀತೇ ಹೊರತು ಪೂರ್ವಪಕ್ಷಿಯು ಹೇಳುವಂತೆ ಅಂತಹ ಪ್ರಯೋಗವು ಗೌಣಾರ್ಥಕವೆಂದಾಗಲಿ ಸ್ತುತ್ಯರ್ಥಕವೆಂದಾಗಲಿ ಆಗುತ್ತಿರಲಿಲ್ಲ. ಆದ್ದರಿಂದ ' ತತ್ತ್ವಮಸಿ ಎಂಬ ವಾಕ್ಯಕ್ಕೂ ಈ ವಾಕ್ಯಕ್ಕೂ ಹೋಲಿಕೆ ಸರಿಯಲ್ಲ.

ಸಿದ್ಧಾಂತಿಯ ಆಶಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಪೂರ್ವಪಕ್ಷಿಯು ಆಕ್ಷೇಪಿಸುತ್ತಾನೆ -

ನನು ಜೀವಸತೋರಪಿ ತತ್ತ್ವಮಿತಿ
ಸ್ಫುಟಮೇಕವಿಭಕ್ತ್ಯ ಭಿಧಾನಮಿದಮ್ ।
ಕಥಮಸ್ಯ ಶರೀರಭೃತೋಽನೃತತಾ
ನ ಭವೇದವಿಭಕ್ತವಿಭಕ್ತಿಯುಜಃ ॥ ೬೦

ಹಾಗಾದರೆ ' ತತ್ತ್ವಮಸಿ ' ಎಂಬ ವಾಕ್ಯದಲ್ಲಿ ಜೀವವಾಚಕವಾದ ' ತ್ವಂ ' ಪದವು ಬ್ರಹ್ಮವಾಚಕವಾದ ' ತತ್ ' ಪದವು ಸಮಾನವಿಭಕ್ತಿಕಗಳಾಗಿವೆಯಲ್ಲವೆ? ಸಮಾನ ವಿಭಕ್ತಿಯಿದೆಯೆಂಬುದು ಸ್ಪಷ್ಟವಾಗಿದೆ. ಏವಂಚ ಸಮಾನ ವಿಭಕ್ತಿಯುಳ್ಳ 'ತ್ವಂ ಪದದಿಂದ ವಾಚ್ಯನಾದ ಜೀವನೂ ಮಿಥ್ಯೆಯೆಂದು ಏಕೆ ಆಗುವುದಿಲ್ಲ?

**ವಿವರಣೆ** :–ಜೀವನು ಪರಮಾರ್ಥದಲ್ಲಿ ಬ್ರಹ್ಮವೇ ಎಂದು ಈ ವಾಕ್ಯವು ಹೇಳುತ್ತದೆಯೇ ಹೊರತು ಜೀವನು ಬ್ರಹ್ಮದ ಕಾರ್ಯವೆಂದಾಗಲಿ ಮಿಥ್ಯೆಯೆಂದಾಗಲಿ ಬೋಧಿಸುವುದಿಲ್ಲ. ಇದು ಸಿದ್ಧಾಂತಿಯ ಹೇಳಿಕೆ. ಆದರೆ ಹಿಂದಿನ ಶ್ಲೋಕದಲ್ಲಿ ಹೇಳಿದ ಯುಕ್ತಿಯಂತೆ ಜೀವನು ಮಿಥ್ಯೆಯೆಂದಾಗುತ್ತದೆ–ಎಂದು ಪೂರ್ವಪಕ್ಷಿಯ ಹೇಳಿಕೆ.

ಸಿದ್ಧಾಂತಿಯ ಸಮಾಧಾನ–

**ಪ್ರಕೃತೇರಭಿಧಾನಪದೇನ ಯದಾ**
**ವಿಕೃತೇರಭಿಧಾನಮುಪೈತಿ ಯುಜಾಮ್ ।**
**ಅನೃತತ್ವಮತಿಸ್ತು ತದಾ ವಿಕೃತೌ**
**ಮೃದಯಂ ಘಟ ಇತ್ಯಭಿಧಾಸು ಯಥಾ ॥** ೬೧

ವಿಕೃತಿವಾಚಕವಾದ ಪದವು ಪ್ರಕೃತಿವಾಚಕವಾದ ಪದದೊಡನೆ ಯೋಗವನ್ನು ಹೊಂದಿದಾಗ ಮಾತ್ರ ವಿಕೃತಿಯಲ್ಲಿ ' ಇದು ಮಿಥ್ಯಾ ' ಎಂಬ ಬುದ್ಧಿಯುಂಟಾಗುತ್ತದೆ. ' ಈ ಗಡಿಗೆ ಮಣ್ಣು ' ಎಂಬ ವಾಕ್ಯದಲ್ಲಿ ಹೇಗೋ ಹಾಗೆ.

ಸಮಾನವಿಭಕ್ತಿಪದಗಳಿದ್ದಲ್ಲೆಲ್ಲ ಒಂದು ಮಿಥ್ಯೆ–ಎಂಬ ಬುದ್ಧಿಯುಂಟಾಗುವುದಿಲ್ಲ. ಪ್ರಕೃತಿ–ವಿಕೃತಿಗಳ ಸಮಾವೇಶದಲ್ಲಿ ಮಾತ್ರ ವಿಕೃತಿಯು ಮಿಥ್ಯೆ ಎಂದು ಗೊತ್ತಾಗುತ್ತದೆ. ' ಈ ಗಡಿಗೆ ಮಣ್ಣು ' ಎಂಬಲ್ಲಿ ಮಣ್ಣು ಪ್ರಕೃತಿ; ಗಡಿಗೆ ಮಣ್ಣಿನ ವಿಕೃತಿ. ಇಂತಹ ಸ್ಥಳದಲ್ಲಿ ಗಡಿಗೆ ಮಿಥ್ಯೆ, ವಸ್ತುತಃ ಅದು ಮಣ್ಣು. ಮಣ್ಣೇ ನಾಮರೂಪಗಳು ಬೇರೆಯಾಗಿ ಕಾಣಿಸಿಕೊಂಡಿವೆ–ಎಂದು ತಿಳಿಯಬೇಕು. ' ತತ್ತ್ವಮಸಿ ' ಎಂಬಲ್ಲಿ ಹಾಗಿಲ್ಲ. ಜೀವನು ಬ್ರಹ್ಮದಿಂದ ಹುಟ್ಟಿಲ್ಲ. ಜೀವನು ಬ್ರಹ್ಮವಿಕೃತಿಯಲ್ಲ. ಪ್ರಕೃತಿವಿಕೃತಿಗಳ ಸಮಾವೇಶ ಅಲ್ಲಿಲ್ಲ. ಹಗ್ಗವನ್ನು ಹಾವೆಂದು ಭ್ರಮಿಸುವಂತೆ, ಬ್ರಹ್ಮವನ್ನೇ ಬೇರೆಯಾದ ಜೀವವೆಂದು ಭ್ರಮಿಸಲಾಗಿದೆ. ಈ ಭ್ರಮೆಯನ್ನು ಹೋಗಲಾಡಿಸಲು 'ತತ್ತ್ವಮಸಿ ' ಎಂಬ ವಾಕ್ಯ ಹೊರಟಿದೆ.

ವಿಕೃತಿತ್ವಮವಾದಿ ಮನಃಪ್ರಭೃತೇಃ
ಬಹುಷು ಶ್ರುತಿಷು ಪ್ರಕೃತೇಸ್ತು ಸತಃ ।
ಅತ ಏವ ಸಮಾನವಿಭಕ್ತಿತಯಾ
ಮನ ಆದಿ ಸುವೇದ್ಯಮಸತ್ಯತಯಾ ॥ ೬೨

ಪ್ರಕೃತಿಯಾದ ಯಾವ ಸದ್ವಸ್ತುಬ್ರಹ್ಮವಿದೆಯೋ ಆದರ ವಿಕೃತಿಗಳು, ಈ ಮನಸ್ಸು, ಸೂರ್ಯ-ಮೊದಲಾದವು ಎಂದು ಅನೇಕ ಶ್ರುತಿಗಳಲ್ಲಿ ಉಕ್ತವಾಗಿದೆ. ಆದ್ದರಿಂದಲೇ ಬ್ರಹ್ಮಶಬ್ದದೊಡನೆ ಸಮಾನವಿಭಕ್ತಿಯಿಂದ ಈ ಶಬ್ದಗಳು ಉಕ್ತವಾದಾಗ ಮನಸ್ಸು-ಮೊದಲಾದವು ಅಸತ್ಯ-ಮಿಥ್ಯೆಯೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ.

'ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ' (ಮಾಂ.೨-೩) 'ತಸ್ಮಾದ್ವಾಏತಸ್ಮಾದಾತ್ಮನ ಆಕಾಶಃ ಸಂಭೂತಃ ' (ತೈ.ಬ್ರ. ೩-೧)-ಇತ್ಯಾದಿ ಶ್ರುತಿಗಳು ಪರಮಾತ್ಮನಿಂದ ಪ್ರಾಣ, ಮನಸ್ಸು, ಇಂದ್ರಿಯ, ಆಕಾಶ-ಮೊದಲಾದವು ಹುಟ್ಟಿವೆಯೆಂದು ತಿಳಿಸುತ್ತವೆ.
ಆದರೆ ಜೀವನು ಪರಮಾತ್ಮನಿಂದ ಹುಟ್ಟಿದ್ದಾನೆಂದು ಯಾವ ಶ್ರುತಿಯೂ ಹೇಳಿಲ್ಲ-

ಜನಿತತ್ವಮವಾದಿ ನ ಹಿ ಶ್ರುತಿಭಿಃ
ಜನಕೇನ ಸತಾಸ್ಯ ಶರೀರಭೃತಃ ।
ಮನ ಆದಿ ವಿಕಾರವಿಲಕ್ಷಣತಾಂ
ಪ್ರತಿಯಂತಿ ಶರೀರಭೃತಸ್ತು ತತಃ ॥ ೬೩

ಶರೀರಧಾರಿಯಾದ ಈ ಜೀವನಿಗಾದರೋ ಜನಕನಾದ ಪರಮಾತ್ಮನಿಂದ ಉತ್ಪತ್ತಿಯಾಗಿದೆಯೆಂದು ಶ್ರುತಿಗಳು ಹೇಳಿಲ್ಲ. ಆದಕಾರಣ ಜೀವನು ಮನಸ್ಸೇ ಮೊದಲಾದ ವಿಕೃತವಸ್ತುಗಳಿಗಿಂತ ವಿಲಕ್ಷಣನೆಂದು ವಿವೇಕಿಗಳು ತಿಳಿದಿದ್ದಾರೆ.

ಯದಜೀಜನದಂಬರಪೂರ್ವಮಿದಂ
ಜಗದಕ್ಷರಮೀಕ್ಷಣವಿಗ್ರಹಕಮ್ ।
ಪ್ರವಿವೇಶ ತದೇವ ಜಗತ್ಸ್ವಕೃತಂ
ಸ ಚ ಜೀವಸಮಾಖ್ಯ ಇತಿ ಶ್ರುತಯಃ ॥ ೬೪

'ಆಕಾಶವೇ ಮೊದಲಾದ ಈ ಜಗತ್ತನ್ನು ಅಕ್ಷರವಾದ ಬ್ರಹ್ಮವು ಈಕ್ಷಣ (ಸಂಕಲ್ಪ)ಪೂರ್ವಕವಾಗಿ ಸೃಷ್ಟಿಸಿತು. ಅನಂತರ ತಾನು ಸೃಜಿಸಿದ ಈ ಜಗತ್ತನ್ನೇ ಜೀವ-ಎಂಬ ಹೆಸರಿನಿಂದ ಪ್ರವೇಶಿಸಿತು' ಎಂಬುದಾಗಿ ಶ್ರುತಿಗಳು ಹೇಳುತ್ತವೆ.

**'ಸ ಐಕ್ಷತ ಲೋಕಾನ್ನು ಸೃಜಾ ಇತಿ'** (ಐತ, ೧-೧-೧) ಎಂಬುದಾಗಿ ಸಂಕಲ್ಪ ಪೂರ್ವಕ ಸೃಷ್ಟಿಯನ್ನು ಹೇಳಲಾಗಿದೆ. **'ತತ್‌ಸೃಷ್ಟ್ವಾತದೇವಾನುಪ್ರಾವಿಶತ್'** (ತೈ. ಬ್ರಹ್ಮ-೬) ಎಂದು ಜೀವಭಾವದಿಂದ ಅನುಪ್ರವೇಶವನ್ನೂ ಶ್ರುತಿಯು ಹೇಳುತ್ತದೆ.

**ಪರಮಾತ್ಮವಿಕಾರವಿವಿಕ್ತಮತಿಃ**
**ನ ಭವತ್ಯತ ಏವ ಶರೀರಭೃತಃ ।**
**ಯತ ಏವ ವಿಕಾರವಿಭಿನ್ನಮತಿಃ**
**ನ ಭವತ್ಯತ ಏವ ಮೃಷಾತ್ವಮತಿಃ ॥ ೬೫**

ಹೀಗೆ ಅನುಪ್ರವೇಶವನ್ನು ಹೇಳಿರುವುದರಿಂದಲೇ ದೇಹಧಾರಿಯಾದ ಜೀವನು ಪರಮಾತ್ಮನ ವಿಕಾರವೆಂಬ ಬುದ್ಧಿಯುಂಟಾಗುವುದಿಲ್ಲ. ಯಾವಾಗ ಜೀವನು ಪರಮಾತ್ಮನ ವಿಕಾರವೆಂಬ ಬುದ್ಧಿ ಹುಟ್ಟುವುದಿಲ್ಲವೋ ಆಗ ಜೀವನು ಮಿಥ್ಯೆಯೆಂಬ ಬುದ್ಧಿಯೂ ಹುಟ್ಟುವುದಿಲ್ಲ.

ಸಚ್ಚಿದಾನಂದಸ್ವರೂಪನಾದ ಪರಮಾತ್ಮನೇ ಜೀವಭಾವದಿಂದ ಅನುಪ್ರವೇಶ ಮಾಡಿದ್ದಾನೆ-ಎಂದಾದಮೇಲೆ ಜೀವವು ಪರಮಾತ್ಮನ ವಿಕಾರವೆಂಬುದರ ಪ್ರಸಂಗವೇ ಇಲ್ಲ. ಎಂದಮೇಲೆ ' **ತತ್‌ತ್ವಮಸಿ** ' ಇತ್ಯಾದಿ ವಾಕ್ಯಗಳಲ್ಲಿ ಸಮಾನ ವಿಭಕ್ತಿ ಇದ್ದರೂ ಜೀವನು ಅನ್ಯತನೆಂದೂ ಪರಮಾತ್ಮನ ವಿಕಾರವೆಂದೂ ಹೇಳಲು ಶಕ್ಯವಿಲ್ಲ. ಜೀವನು ಪರಮಾತ್ಮನೇ ಆಗಿದ್ದಾನೆ.

ಇದು ಗೌಣಪ್ರಯೋಗವೂ ಅಲ್ಲ-

**ಅವಿಭಕ್ತವಿಭಕ್ತ್ಯಭಿಧಾನಕೃತಾ**
**ಪರಮಾತ್ಮಪದೇನ ಶರೀರಭೃತಃ ।**
**ನ ಭವೇದಿಹ ತತ್ತ್ವಮಸಿಪ್ರಭೃತೌ**
**ಲವಣಂ ಜಲಮಿತ್ಯಭಿಧಾ ತು ಯಥಾ ॥ ೬೬**

ತತ್ತ್ವಮಸಿ-ಮುಂತಾದ ಮಹಾವಾಕ್ಯಗಳಲ್ಲಿ ಪರಮಾತ್ಮವಾಚಕಪದಕ್ಕೂ ಶರೀರಧಾರಿಯಾದ ಜೀವಾತ್ಮನ ವಾಚಕವಾದ ಪದಕ್ಕೂ ಸಮಾನ ವಿಭಕ್ತಿಯಿರುವುದರಿಂದ ' **ಲವಣಂ-ಜಲಂ**-ನೀರು ಉಪ್ಪು ' ಎಂಬಂತೆ (ಇದು ಗುಣನಿಮಿತ್ತಕವಾದ)ಗೌಣಪ್ರಯೋಗವಾಗಲಿ ಎಂಬ ಶಂಕೆಯೂ ಸರಿಯಲ್ಲ.

ಪರಮಾತ್ಮನೇ ಜೀವಾತ್ಮಭಾವದಲ್ಲಿ ತೋರಿಕೊಳ್ಳುತ್ತಾನೆಂದು ಹಿಂದೆ ತೋರಿಸಿಕೊಡಲಾಗಿದೆ. ಆದ್ದರಿಂದ ೫೧ ನೇ ಶ್ಲೋಕದಲ್ಲಿ ಆಕ್ಷೇಪಿಸಿದಂತೆ ' ಈಶ್ವರಗುಪ್ತನು ಸಿಂಹ ' ಎಂಬಂತೆ ಸ್ತುತಿಗಾಗಿ ಈ ಪ್ರಯೋಗವೆಂಬ ಶಂಕೆಯೂ ಸಾಧುವಲ್ಲ. ಸಿಂಹದ

ಶೌರ್ಯಧೈರ್ಯಾದಿಗುಣಗಳು ಈಶ್ವರಗುಪ್ತನಲ್ಲಿರುವುದರಿಂದ ಅಂತಹ ಪ್ರಯೋಗ ಬರುತ್ತದೆ. ಅದೇ ಬಗೆಯ '**ಲವಣಂ ಜಲಂ** ' ಎಂಬ ಇನ್ನೊಂದು ಉದಾಹರಣೆಯನ್ನು ಇಲ್ಲಿ ಕೊಡಲಾಗಿದೆ. ಲವಣದ ಗುಣ ನೀರಿನಲ್ಲಿ ಸೇರಿಕೊಂಡಿರುವುದರಿಂದ ಇಂತಹ ಪ್ರಯೋಗ ಬರುತ್ತದೆ. ಹಾಗೆ ಪರಮಾತ್ಮನ ಚೈತನ್ಯವಂಬುದು ಜೀವನಲ್ಲಿ ಸೇರಿಕೊಂಡಿದ್ದರಿಂದ '**ತತ್ತ್ವಮಸಿ**'ಎಂಬುದು ಗೌಣಪ್ರಯೋಗವೆಂಬುದೂ ಸರಿಯಲ್ಲ. ಮುಖ್ಯಪ್ರಯೋಗವೇ ಸಪ್ರಮಾಣವಾಗಿರುವಾಗ ಗೌಣಪ್ರಯೋಗವೆಂಬುದೂ ಯುಕ್ತವಲ್ಲ. 'ಶ್ರೀಕೃಷ್ಣನು ನಾರಾಯಣನೇ ಸರಿ' ಎಂದರೆ ಅದು ಗೌಣಪ್ರಯೋಗವಾಗುವುದಿಲ್ಲ. ಆದ್ದರಿಂದ ಮಹಾವಾಕ್ಯವು ಅರ್ಥವಾದವಲ್ಲ.

**ಪರಮಾತ್ಮವಿಕಾರನಿರಾಕರಣಂ**
**ಕೃತಮಸ್ಯ ಶರೀರಭೃತಸ್ತು ಯತಃ ।**
**ಪರಮೇಶ್ವರರೂಪವಿಲಕ್ಷಣತಾ**
**ನ ಮನಾಗಪಿ ದೇಹಭೃತೋಽಸ್ತಿ ತತಃ ॥ ೬೭**

ದೇಹಧಾರಿಯಾದ ಜೀವಾತ್ಮನು ಪರಮಾತ್ಮನ ವಿಕಾರವಲ್ಲವೆಂದು ಈ ಪ್ರಕಾರದಲ್ಲಿ ನಿರಾಕರಿಸಲಾಯಿತು (ಹಾಗೆಯೇ '**ತತ್ತ್ವಮಸಿ**' ಎಂಬುದು ಗೌಣಪ್ರಯೋಗವಲ್ಲವೆಂದು ಸ್ಪಷ್ಟಗೊಳಿಸಲಾಯಿತು). ಆದ್ದರಿಂದ ಜೀವಾತ್ಮನಿಗೆ ಪರಮಾತ್ಮಸ್ವರೂಪಕ್ಕಿಂತ ಭೇದವು ಸ್ವಲ್ಪವೂ ಇಲ್ಲವೆಂದು ತಿಳಿಯತಕ್ಕದ್ದು.

**ನನು ಜೀವಸತೋರಣುಮಾತ್ರಮಪಿ**
**ಸ್ವಗತಂ ನ ವಿಶೇಷಣಮಸ್ತಿ ಯದಾ ।**
**ವದ ತತ್ತ್ವಮಸೀತಿ ತದಾ ವಚನಂ**
**ಕಿಮು ವಕ್ತಿ ತಥೈಷ ತ ಇತ್ಯಪಿ ಚ ॥ ೬೮**

ಜೀವನಿಗೂ ಸದ್ವಸ್ತುವಾದ ಬ್ರಹ್ಮಕ್ಕೂ ಸ್ವಗತವಾದ ವಿಶೇಷವು ಲೇಶವೂ ಇಲ್ಲವೆಂದಾದಮೇಲೆ '**ತತ್ತ್ವಮಸಿ**' '**ಏಷ ತ ಆತ್ಮಾಂತರ್ಯಾಮ್ಯಮೃತ:** ' (ಬೃಹ-೩-೭-೨೩) ಎಂಬುದಾಗಿ ಅವರ ಅಭೇದವನ್ನು ಶ್ರುತಿಯು ಹೇಳುವುದಾದರೂ ಏಕೆ ? ಅದು ಬೋಧಿಸುವುದು ಏನನ್ನು ? ಹೇಳು.

ಸಿದ್ಧಾಂತದ ಮೇಲೆ ಇದೊಂದು ಆಕ್ಷೇಪ. ಗಡಿಗೆಯು ಮಣ್ಣು ಎಂಬುದು ಲೋಕಸಿದ್ಧವಾಗಿದೆ. ಅಂತಃಪ್ರವೇಶಾದಿ ಶ್ರುತಿಗಳಿಂದ ಪರಮಾತ್ಮನೇ ಜೀವನೆಂದು ಸಿದ್ಧವಾಗಿದೆ. ಹೀಗೆ ಸಿದ್ಧವಾದ ವಿಷಯವನ್ನು ಮತ್ತೆ ಬೋಧಿಸಬೇಕಾದ ಅವಶ್ಯಕತೆಯಾದರೂ ಏನು ?- ಎಂದು ಆಕ್ಷೇಪ.

ಜೀವಪರಮಾತ್ಮರಿಗೆ ಭೇದವನ್ನು ಜನರು ಭ್ರಮೆಯಿಂದ ಕಲ್ಪಿಸಿಕೊಂಡಿದ್ದಾರೆ. ಅಂತಹ ಭೇದವನ್ನು ನಿರಾಕರಿಸಿ ಅಭೇದವನ್ನು ಜ್ಞಾಪಿಸುವುದಕ್ಕಾಗಿ ಅಭೇದಶ್ರುತಿಗಳು ಹೊರಟಿವೆಯೆಂದು ಪರಿಕರಸಹಿತವಾಗಿ ಸಿದ್ಧಾಂತಿಯು ಉತ್ತರ ಹೇಳುತ್ತಾನೆ. –

**ಸ್ವಗತಂ ಯಧಿ ಭೇದಕಮಿಷ್ಟಮಭೂತ್**
**ಅಣುಮಾತ್ರಮಪೀಶ್ವರದೇಹಭೃತೋಃ ।**
**ಅಪನೇತುಮಶಕ್ಯಮದೋವಚನೈ:**
**ಅಮುನಾಸ್ಯ ಪೃಥಕ್ತ್ವನಿಷೇಧಪರೈಃ ॥** ೭೯

ಈಶ್ವರನಿಗೂ ಜೀವನಿಗೂ ಸ್ವರೂಪಭೇದವು ಲವಮಾತ್ರವಾದರೂ ಸಂಮತವಾಗಿದ್ದರೆ, ಜೀವನು ಈಶ್ವರನಿಗಿಂತ ಭಿನ್ನನಲ್ಲವೆಂದು ಎಷ್ಟು ವಾಕ್ಯಗಳನ್ನು ಹೇಳಿದರೂ ಅಂತಹ ಭೇದವನ್ನು ಹೋಗಲಾಡಿಸಲು ಶಕ್ಯವಾಗುವುದಿಲ್ಲ.

**ಇಹ ಯಸ್ಯ ಚ ಯೋ ಗುಣ ಆತ್ಮಗತಃ**
**ಸ್ವತ ಏವ ನ ಜಾತು ಭವೇತ್ಪರತಃ ।**
**ವಚನೇನ ನ ತಸ್ಯ ನಿರಾಕರಣಂ**
**ಕ್ರಿಯತೇ ಸ ಗುಣಃ ಸಹಜಸ್ತು ಯತಃ ॥** ೮೦

ಈ ಲೋಕದಲ್ಲಿ ಕಂಡುಬಂದಿರುವುದೇನೆಂದರೆ, ಯಾವ ವಸ್ತುವಿಗೆ ಯಾವ ಗುಣವು ಸಹಜವಾಗಿ ಆತ್ಮಗತವಾಗಿದೆಯೋ ಯಾವಾಗಲೂ ಪರಕೀಯ ವಸ್ತುವಿನ ಸಹವಾಸದಿಂದ ಬಂದಿಲ್ಲವೋ ಆ ವಸ್ತುವಿನ ಆ ಗುಣವನ್ನು ಎಂದಿಗೂ ನಿರಾಕರಿಸಲಾಗುವುದಿಲ್ಲ. ಏಕೆಂದರೆ ಆ ಗುಣವು ಅದಕ್ಕೆ ಸಹಜವಾದದ್ದು.

**ವಿವರಣೆ** :–ಬೆಂಕಿಯ ಉಷ್ಣಗುಣವನ್ನು ಯಾರಿಂದಲೂ ನಿರಾಕರಿಸಲಾಗುವುದಿಲ್ಲ. ಏಕೆಂದರೆ ಅದು ಬೆಂಕಿಗೆ ಸಹಜವಾದದ್ದು. ನೀರಿನ ಉಷ್ಣಗುಣವನ್ನು ಮಾತ್ರ ನಿರಾಕರಿಸಬಹುದು. ಏಕೆಂದರೆ ನೀರಿನಲ್ಲಿ ಆ ಗುಣವು ಬೆಂಕಿಯ ಸಹವಾಸದಿಂದ ಬಂದ ಆಗಂತುಕ ಗುಣವಾಗಿದೆ. ಹೀಗೆಯೇ ಜೀವನಲ್ಲಿ ಬ್ರಹ್ಮದ ಸಚ್ಚಿದಾನಂದ ಸ್ವಭಾವವು ಸಹಜವಾಗಿದೆ. ಅದು ಆಗಂತುಕವಲ್ಲ. ಶೋಕ, ಭಯಾದಿಗಳು ಮಾತ್ರ ಆಗಂತುಕ. ಅವು ಭ್ರಮೆಯಿಂದ ಕಲ್ಪಿತವಾದವು. ಚಿತ್ತದ ಸಹವಾಸದಿಂದ ಚಿತ್ತಗತಗಳಾದ ಆ ಧರ್ಮಗಳು ಜೀವನಲ್ಲಿವೆಯೋ ಎಂಬಂತೆ ತೋರುತ್ತದೆ. ಹೀಗೆ ತೋರುವ ಗುಣಗಳನ್ನು ನಿಷೇಧಿಸಿ ಜೀವನು ಪರಮಾತ್ಮನೇ ಎಂದು ಬೋಧಿಸುವುದಕ್ಕಾಗಿ 'ತತ್ತ್ವಮಸಿ ' ಎಂಬ ಮಹಾವಾಕ್ಯವು ಹೊರಟಿದೆ.

ವಚನಂ ತ್ವವಬೋಧಕಮೇವ ಯತಃ
ತತ ಏವ ನ ವಸ್ತುವಿಪರ್ಯಯಕೃತ್ ।
ನ ಹಿ ವಸ್ತ್ವಪಿ ಶಬ್ದವಶಾತ್ಪ್ರಕೃತಿಂ
ಪ್ರಜಹಾತ್ಯನವಸ್ಥಿತಿದೋಷಭಯಾತ್ ॥ ೭೧

ವಾಕ್ಯವು ವಸ್ತುಸ್ವಭಾವದ ಜ್ಞಾಪಕವಾಗಿರುತ್ತದೆಯೇ ಹೊರತು ಬೇರೆಯಲ್ಲ. ಆದ್ದರಿಂದಲೇ ಅದು ವಸ್ತುಸ್ವಭಾವವನ್ನು ಬದಲಾಯಿಸತಕ್ಕ ಕಾರಕವಲ್ಲ. ಏಕೆಂದರೆ, ಯಾವ ವಾಕ್ಯವನ್ನು ಹೇಳಿಬಿಟ್ಟರೆ ಯಾವ ವಸ್ತುವಾಗಲಿ ಅದಕ್ಕೆ ಅನುಗುಣವಾಗಿ ತನ್ನ ಸ್ವಭಾವವನ್ನು ಬಿಟ್ಟು ಬಿಡುವುದಿಲ್ಲ. ಹಾಗೆ ಬಿಟ್ಟು ಬಿಡುವುದಾದರೆ ಅನವಸ್ಥೆಯೆಂಬ ದೋಷವುಂಟಾಗುತ್ತದೆ.

**ವಿವರಣೆ** :–ಶ್ರುತಿವಾಕ್ಯವಾಗಲಿ ಮತ್ತೊಂದು ವಾಕ್ಯವಾಗಲಿ ಪದಾರ್ಥದ ನಿಜ ಸ್ವರೂಪವನ್ನು ನಮಗೆ ತಿಳಿಸಿಕೊಡುತ್ತದೆ. ಆದ್ದರಿಂದ ವಾಕ್ಯವು ಜ್ಞಾಪಕ, ಕಾರಕವಲ್ಲ. ಬೆಂಕಿಯು ಯಾವಾಗಲೂ ಉಷ್ಣವೇ ಹೊರತು ಯಾರೋ ಹೇಳಿದರೆಂದು ಶೀತವಾಗಿ ಬಿಡುವುದಿಲ್ಲ. ವಾಕ್ಯವು ಕಾರಕವಾದಲ್ಲಿ ಯಾವ ಪದಾರ್ಥಕ್ಕೂ ಒಂದು ಸ್ವರೂಪವಿಲ್ಲದೆ ಅದು ಬದಲಾಯಿಸುತ್ತಹೋಗಬೇಕಾದೀತು. ಜೀವನು ಬ್ರಹ್ಮವೇ ಆಗಿದ್ದಾನೆಂದು "ತತ್ತ್ವಮಸಿ" ಮೊದಲಾದ ವಾಕ್ಯಗಳು ನಮಗೆ ಬೋಧಿಸುತ್ತವೆ. ಅಜ್ಞಾನದಿಂದ ಕಲ್ಪಿತ ಭೇದವನ್ನು ನಿರಾಕರಿಸಿ ಸತ್ಯಸ್ಥಿತಿಯನ್ನು ತಿಳಿಸಿಕೊಡುತ್ತದೆ. ಜೀವನಿಗೂ ಬ್ರಹ್ಮನಿಗೂ ಪಾರಮಾರ್ಥಿಕವಾದ ಭೇದವಿದ್ದ ಪಕ್ಷದಲ್ಲಿ ಸಾವಿರ ಶ್ರುತಿವಾಕ್ಯಗಳೂ ಭೇದವನ್ನು ಹೋಗಲಾಡಿಸಲಾರವು. ಆದ್ದರಿಂದ ಶ್ರುತಿಯು ಜ್ಞಾಪಕ, ಕಾರಕವಲ್ಲ.

ಯತ ಏವಮತೋ ವಿಷಯಸ್ಯ ಗುಣಂ
ವಿಷಯೇಣ ಸಹಾತ್ಮನಿ ಮೂಢಧಿಯಾ ।
ಅಧಿರೋಪಿತಮಪ್ಸ್ವಿವ ಭೂಮಿಗುಣಂ
ಪ್ರತಿಷೇಧತಿ ತತ್ತ್ವಮಸೀತಿ ವಚಃ ॥ ೭೨

ಮೂಢಬುದ್ಧಿಯಾದ ಮನುಷ್ಯನು ಆತ್ಮನಲ್ಲಿ (ಇಂದ್ರಿಯ ಗೋಚರವಾದ) ವಿಷಯದ ಗುಣವನ್ನು ಆರೋಪಿಸಿ ಕಲ್ಪಿಸಿಕೊಂಡಿದ್ದಾನೆ. ನೀರಿನಲ್ಲಿ ಭೂಮಿಯ ಗುಣವನ್ನು ಆರೋಪಿಸಿಕೊಂಡ ಹಾಗೆ. ತತ್ತ್ವಮಸಿ ಇತ್ಯಾದಿ ವಚನವು ಹೀಗೆ ಆರೋಪಿತವಾದ ಗುಣವನ್ನೂ ಆತ್ಮನು ವಿಷಯನಾಗಿರುತ್ತಾನೆಂಬ ಕಲ್ಪನೆಯನ್ನೂ ಹೋಗಲಾಡಿಸುತ್ತದೆ.

ನಾವು ಭ್ರಮೆಯಿಂದ ಎಷ್ಟೋ ಕಲ್ಪನೆಗಳನ್ನು ಮಾಡಿಕೊಂಡು ಹಾಗೆಯೇ ವ್ಯವಹರಿಸುತ್ತ ಇದ್ದೇವೆ. ನೀರು ಸುಗಂಧಿಯಾಗಿದೆ, ನೀರು ದುರ್ಗಂಧವಾಗಿದೆ

–ಎನ್ನುತ್ತೇವೆ. ಗಂಧವು ಭೂಮಿಯ ಗುಣ. ನೀರಿನಲ್ಲಿ ಭೂಕಣಗಳು ಸೇರಿಕೊಂಡಿರುವುದರಿಂದ ನೀರೇ ಗಂಧವುಳ್ಳದ್ದೆಂದು ತೋರುತ್ತದೆ. ಹಾಗೆಯೇ ನೀರು ಬಿಸಿಯಾಗಿದೆ ಎನ್ನುತ್ತೇವೆ. ಬಿಸಿಯು ನೀರಿನ ಗುಣವಲ್ಲ. ಅದು ಬೆಂಕಿಯ ಗುಣ. ಅಂತೆಯೇ ಆತ್ಮನಲ್ಲಿ ಹಲವಾರು ಅನಾತ್ಮವಸ್ತುಗಳ ಗುಣಗಳು ಕಲ್ಪಿತವಾಗಿವೆ. " **ಅಸ್ಥೂಲಮನಣು ಅಹ್ರಸ್ವಂ** " (ಬೃಹ. ೩-೮-೮). " **ಅಶಬ್ದಮಸ್ಪರ್ಶಂ** " (ಕಠ. ೧-೩-೧೫) ಇತ್ಯಾದಿ ವಚನಗಳು ಹೀಗೆ ಕಲ್ಪಿತ ಧರ್ಮಗಳನ್ನು ನಿರಾಕರಿಸುತ್ತವೆ. ಶಬ್ದಸ್ಪರ್ಶಾದಿಗಳು ವಿಷಯಗಳು ಮತ್ತು ವಿಷಯಧರ್ಮಗಳು. ಕಲ್ಪಿತವಾದ ಜೀವಾತ್ಮ ಸ್ವರೂಪವೂ ವಿಷಯವೇ. ಇವೆಲ್ಲವನ್ನೂ ಶ್ರುತಿಯು ನಿರಾಕರಿಸಿ ಜೀವನು ನಿರ್ಗುಣನೂ ದೃಕ್‌ಸ್ವರೂಪನೂ ಆಗಿದ್ದಾನೆಂದು ತಿಳಿಸಿಕೊಡುತ್ತದೆ.

**ಅತ ಏವ ನ ದೃಷ್ಟಿವಿಧಾನಪರಂ**
**ಗುಣವಾದಪರಂ ಚ ನ ತದ್ವಚನಮ್ ।**
**ಸ್ತುತಿವಾದ್ಯಪಿ ನೈತದುಪಾಸ್ಯತಯಾ**
**ವಿಧಿರತ್ರ ನ ದೇಹಭೃತೋಽಸ್ತಿ ಯತಃ ॥** ೭೩

ಆದ್ದರಿಂದ "ತತ್ತ್ವಮಸಿ" ಎಂಬ ವಾಕ್ಯವು (ಹಿಂದೆ ೫೦ನೇ ಶ್ಲೋಕದಲ್ಲಿ ಪೂರ್ವಪಕ್ಷಿಯು ಆಕ್ಷೇಪಿಸಿದಂತೆ) ಜೀವನಲ್ಲಿ ಬ್ರಹ್ಮದೃಷ್ಟಿಯನ್ನಿಡಬೇಕೆಂಬ ವಿಧಿಪರವೂ ಅಲ್ಲ. (೫೧ನೇ ಶ್ಲೋಕದಲ್ಲಿ ಆಕ್ಷೇಪಿಸಿದಂತೆ) ಗೌಣಾರ್ಥಕವೂ ಅಲ್ಲ. ಅಥವಾ (೫೨ನೇ ಶ್ಲೋಕದಲ್ಲಿ ಆಕ್ಷೇಪಿಸಿದಂತೆ) ಉಪಾಸನಾರ್ಥವಾದ ಸ್ತುತಿಯನ್ನು ಪ್ರತಿಪಾದಿಸತಕ್ಕದ್ದೂ ಅಲ್ಲ. ಏಕೆಂದರೆ, ಈ ವಾಕ್ಯದಲ್ಲಿ ಜೀವನಿಗೆ ಹೇಳಿದ ಯಾವ ವಿಧಿಯೂ ಇಲ್ಲ.

**ಸತ ಏವ ಹಿ ನಾಮ ಜಗತ್‌ಪ್ರಕೃತೇಃ**
**ಉಪಧಾನವಶಾದಿಹ ಜೀವ ಇತಿ ।**
**ಅತ ಏವ ಹಿ ಜೀವಸತತ್ತ್ವಕತಾಂ**
**ಪ್ರಕೃತಸ್ಯ ಸತಃ ಪ್ರತಿಪಾದಯುತಿ ॥** ೭೪

ಜಗತ್ಕಾರಣವಾದ ಸದ್ವಸ್ತುವಿಗೆ (ಅಂತಃಕರಣವೇ ಮೊದಲಾದ) ಉಪಾಧಿಗಳ ವಶದಿಂದ ಈ ಲೋಕದಲ್ಲಿ ಜೀವವೆಂದು ಹೆಸರಾಗಿದೆ–ಎಂಬುದಾಗಿ ಆ ವಾಕ್ಯವು ಪ್ರತಿಪಾದಿಸುತ್ತದೆ. ಆದ್ದರಿಂದ ಪ್ರಕೃತವಾದ ಸದ್ವಸ್ತುವಿಗೆ ಜೀವಸಾದೃಶ್ಯವನ್ನು ಪ್ರತಿಪಾದಿಸುವುದಿಲ್ಲ.

ಇಲ್ಲಿ ಇನ್ನೊಂದು ಹೊಸ ಆಕ್ಷೇಪವನ್ನು ಪೂರ್ವಪಕ್ಷಿ ಎತ್ತಿದ್ದಾನೆ. ಹಿಂದೆ ಬ್ರಹ್ಮಸಾದೃಶ್ಯವನ್ನು ಜೀವಕ್ಕೆ ಹೇಳಿದಂತೆ, ಈಗ ಜೀವಸಾದೃಶ್ಯವನ್ನು ಬ್ರಹ್ಮಕ್ಕೆ ಹೇಳೋಣ–ಎಂದು ಆತನ ಅಭಿಪ್ರಾಯ. "**ಮುಖಂ ಕಮಲಂ**" ಎಂಬ ರೂಪಕ

ಸ್ಥಳದಲ್ಲಿ ಕಮಲಸಾದೃಶ್ಯವು ಮುಖದಲ್ಲಿ ತೋರುವಂತೆ ವಿವಕ್ಷಾವಶದಿಂದ ಮುಖ ಸಾದೃಶ್ಯವು ಈ ಕಮಲದಲ್ಲಿ ತೋರಬಹುದು, "ತ್ವಲ್ಲೋಚನಸಮಂ ಪದ್ಮಂ" ಎಂಬ ಪ್ರತೀಪಾಲಂಕಾರದಂತೆ. ಈ ಆಕ್ಷೇಪಕ್ಕೆ ಸಿದ್ಧಾಂತಿಯ ಉತ್ತರವೇನೆಂದರೆ–

**ಯದಿ ಜೀವಸತತ್ತ್ವಕತಾಂ ಗಮಯೇತ್**
**ಅಣಿಮಾದಿಗುಣಸ್ಯ ಜಗತ್ ಪ್ರಕೃತೇಃ ।**
**ಅಣಿಮಾದಿಗುಣೋಕ್ತಿರತೋಽಸ್ಯ ಮೃಷಾ**
**ಯದಿ ವಾಸ್ಯ ಶರೀರಭೃದಾತ್ಮಕತಾ ॥** ೭೫

ಜಗತ್ಕಾರಣವೂ ಅಣಿಮಾದಿಗುಣಸಂಪನ್ನವೂ ಆದ ಸದ್ವಸ್ತುವಿಗೆ ಆ ವಾಕ್ಯವು ಜೀವಸಾದೃಶ್ಯವನ್ನು ಪ್ರತಿಪಾದಿಸುವುದಾದರೆ, ಆಗ ಸದ್ವಸ್ತುವಿಗೆ ಅಣಿಮಾದಿಗುಣ ಸಂಪನ್ನತೆಯನ್ನು ಹೇಳಿದ್ದು ವ್ಯರ್ಥವಾಗುತ್ತದೆ. ಒಂದು ವೇಳೆ ತತ್ತ್ವಮಸಿ ಎಂಬ ವಾಕ್ಯವು ಸದ್ವಸ್ತುವಿಗೆ ಜೀವಸ್ವರೂಪವನ್ನು (ಜೀವಾಭೇದವನ್ನು) ಪ್ರತಿಪಾದಿಸುತ್ತದೆ ಯೆಂದು ಹೇಳಿದರೂ ಸಹ ಸದ್ವಸ್ತುವಿಗೆ ಅಣಿಮಾದಿ ಗುಣ ಸಂಪನ್ನತೆಯನ್ನು ಹೇಳಿದ್ದು ವ್ಯರ್ಥವೇ ಆಗುತ್ತದೆ.

**ವಿವರಣೆ** :–"**ಏಷೋಽಣಿಮೈತದಾತ್ಮ್ಯಮಿದಂ ಸರ್ವಂ । ತತ್ಸತ್ಯಂ । ಸ ಆತ್ಮಾ । ತತ್ತ್ವಮಸಿ ॥** " (ಛಾಂ. ೬–೮–೭)–ಎಂದು ಶ್ರುತಿವಾಕ್ಯವಿದೆ. ಅಣಿಮಾ ಎಂದರೆ ಅತ್ಯಂತ ಸೂಕ್ಷ್ಮವಾದದು, ಇಂದ್ರಿಯ ಗೋಚರವಲ್ಲದ್ದು, ಪರೋಕ್ಷವಾದದ್ದು ಎಂದರ್ಥ. ಐತದಾತ್ಮ್ಯಂ ಎಂದರೆ, ಸರ್ವವೂ ಈ ಆತ್ಮದಿಂದ ತುಂಬಿದೆ, ಇದಕ್ಕೆ ಇನ್ನೊಂದು ಆತ್ಮವಿಲ್ಲ, ಎಲ್ಲವೂ ಈ ಆತ್ಮವೇ ಎಂದರ್ಥ. ಪರಮಾತ್ಮನಿಗೆ ಜೀವಸಾದೃಶ್ಯವನ್ನು ಹೇಳುವುದು ಯಾವ ರೀತಿಯಲ್ಲಿಯೂ ಹೊಂದುವುದಿಲ್ಲ. ಏಕೆಂದರೆ–

೧. ಜೀವನು ಅತಿಸೂಕ್ಷ್ಮವಾದ ಪರೋಕ್ಷವಸ್ತುವಲ್ಲ,. ಪ್ರತಿಯೊಬ್ಬನೂ "ನಾನು ಇದ್ದೇನೆ" ಎಂದು ತಿಳಿದುಕೊಂಡೇ ಇರುತ್ತಾನೆ.

೨. ಜೀವನು ತಾನು ಸರ್ವಾತ್ಮನಲ್ಲವೆಂದು ತಿಳಿದುಕೊಂಡಿರುತ್ತಾನೆ.

೩. ಉಪಮಾನದಲ್ಲಿ ಗುಣಗಳನ್ನು ಹೇಳಿ ಉಪಮೇಯದೊಡನೆ ಸಂಗಮನ ಮಾಡಬೇಕೇ ಹೊರತು ಉಪಮೇಯದಲ್ಲಿಯೇ ಗುಣಗಳನ್ನು ಹೇಳುವುದು ಅಸಂಗತ. ಪೂರ್ವಪಕ್ಷಿಯ ಪ್ರಕಾರ ಪರಮಾತ್ಮನೇ ಉಪಮೇಯನಾಗುತ್ತಾನೆ.

೪. ಉಪಮೇಯವು ಸುಪ್ರಸಿದ್ಧವಾಗಿರಬೇಕು. ಪ್ರಕೃತದಲ್ಲಿ ಪರಮಾತ್ಮನೇ ಅಪ್ರಸಿದ್ಧನಾಗಿರುವುದರಿಂದ ಆತನ ಸ್ವರೂಪವನ್ನು ಪರಿಚಯಿಸಬೇಕಾಗಿದೆ. ಆದ್ದರಿಂದ ಅಣಿಮಾದಿಗಳನ್ನು ಅವನಲ್ಲಿ ಹೇಳುವುದು ಯುಕ್ತ, ಜೀವನಲ್ಲಲ್ಲ.

೫. " ಐತದಾತ್ಮ್ಯಮಿದಂ ಸರ್ವಂ "-ಎಂದು ಹೇಳಿದ ಮೇಲೆ ಜೀವವೆಂಬ ಇನ್ನೊಂದು ಪದಾರ್ಥವೇ ಇರುವುದಿಲ್ಲ. ಅದ್ವಿತೀಯನಾದ ಆತ್ಮನಿಗೆ ಯಾರೊಡನೆ ಹೋಲಿಕೆ ? ಇತ್ಯಾದಿ.

ಇದಲ್ಲದೆ, ಇನ್ನೊಂದು ಆಕ್ಷೇಪವನ್ನು ಎತ್ತಿ ಈ ಶ್ಲೋಕದಲ್ಲಿ ನಿರಾಕರಿಸಲಾಗಿದೆ. ಪರಮಾತ್ಮನೇ ಜೀವಾತ್ಮನಾಗಿ ಪರಿಣಮಿಸಿದ್ದಾನೆಂಬ ಪರಿಣಾಮವಾದ ಇದು. ಈ ಪಕ್ಷದಲ್ಲಿಯೂ ಅಣಿಮಾದಿಗುಣೋಕ್ತಿಯು ವ್ಯರ್ಥವೇ. ರೂಪಾಂತರಗೊಂಡ ವಸ್ತುವಿನ ಪರಿಚಯ ನಮಗೆ ಬೇಕಾಗಿದೆಯೇ ಹೊರತು, ಮೂಲವಸ್ತುವಿನ ಪರಿಚಯ ಅನಾವಶ್ಯಕ. ಮತ್ತು ಮೂಲವಸ್ತು ಅತಿಸೂಕ್ಷ್ಮವೂ ಸರ್ವಾತ್ಮವೂ ಆಗಿದ್ದಮೇಲೆ ಪರಿಣಾಮಗೊಂಡ ಜೀವಾತ್ಮನೂ ಅಂತಹವನೇ ಆಗ ಬೇಕಾಗುತ್ತದೆ. ಜೀವಾತ್ಮನು ಅತಿಸೂಕ್ಷ್ಮನಾಗಲಿ ಸರ್ವಾತ್ಮನಾಗಲಿ ದ್ವೈತಮತದಂತೆ ಆಗಿಲ್ಲವಾದ್ದರಿಂದ ಅಣಿಮಾದಿಗುಣೋಕ್ತಿಯು ಸುಳ್ಳಾಗುತ್ತದೆ. ಮೃಷಾಶಬ್ದಕ್ಕೆ ವ್ಯರ್ಥವೆಂದೂ ಸುಳ್ಳೆಂದೂ ಎರಡು ಅರ್ಥವುಂಟು. ನೈಯಾಯಿಕಾದಿಗಳ ಮತದಂತೆ ಜೀವನು ವಿಭು, ಅಣುವಲ್ಲ.

**ನ ಚ ಸಂಸೃತಿಹೇತುನಿರಾಕರಣಂ**
**ಕೃತಮಸ್ಯ ಶರೀರಭೃತೋಽಭಿಮತಮ್ ।**
**ಪರಮೇಶ್ವರಮಾತ್ಮತಯಾ ಬ್ರುವತಾ**
**ವಚನೇನ ಚ ತತ್ತ್ವಮಸೀತ್ಯಮುನಾ ॥** ೭೬

(ಸಂಸಾರಕ್ಕೆ ಹೇತುವಾದದ್ದು ಕರ್ಮಗಳ ಲೇಪ. ಪರಮಾತ್ಮನಿಗೆ ಈ ಕರ್ಮಲೇಪವಿಲ್ಲ. ಜೀವನು ವಸ್ತುತಃ ಪರಮಾತ್ಮನೇಆದ್ದರಿಂದ ಅವನಿಗೆ ಕರ್ಮಲೇಪವಿಲ್ಲ. ತತ್ತ್ವಮಸಿ ಎಂಬ ವಚನವು ಜೀವನಿಗೆ ಸಂಸಾರಕಾರಣವಾದಕರ್ಮಲೇಪವಿಲ್ಲ. ವೆಂದು ಅದನ್ನು ನಿರಾಕರಿಸುತ್ತದೆ. ಇದು ಸಿದ್ಧಾಂತಿಗೆ ಸಂಮತವಾದದ್ದು).
ತತ್ತ್ವಮಸಿ ಎಂಬ ವಚನವು ಪರಮಾತ್ವನೇ ಜೀವನಾಗಿದ್ದಾನೆಂದು ಬೋಧಿಸುವುದಾದರೆ, ಮೇಲ್ಕಂಡಂತೆ ಸಂಸಾರಹೇತು ನಿರಾಕರಣವೇನುಂಟು, ಅದನ್ನು ಈ ವಚನವು ಮಾಡಿದಂತಾಗುವುದಿಲ್ಲ.

ಪರಮಾತ್ಮನೇ ಜೀವಸ್ವರೂಪವನ್ನು ತಳೆದಿದ್ದಾನೆಂದು ಮಹಾವಾಕ್ಯಕ್ಕೆ ತಲೆಕೆಳಗು ಅರ್ಥಮಾಡಿದಲ್ಲಿ ಈ ದೋಷ ಸಂಭವಿಸುತ್ತದೆ. ಪರಮಾತ್ಮನು ಜೀವನಾಗಿ ಸಂಸಾರ

ಬಂಧನದಲ್ಲಿ ಸಿಲುಕಿಕೊಂಡಿದ್ದಾನೆಂಬ ವಿಪರೀತಾರ್ಥ ತೋರಿಬಿಡುತ್ತದೆ. ಇದರಿಂದ ಮಹಾವಾಕ್ಯವು ಏನನ್ನು ಸಾಧಿಸಿದಂತಾಯಿತು ? ಏನನ್ನು ತಿಳಿಸಿಕೊಟ್ಟಂತಾಯಿತು ?

ಮುಂದೆ ಹೇಳುವ ಕಾರಣದಿಂದಲೂ ಈ ವಿಪರೀತಾರ್ಥವು ಸರಿಯಲ್ಲ-

**ತ್ವಮಸೀತಿ ಪದದ್ವಯಮೇತಿ ಯುಜಾಂ**
**ತದಿತಿ ಧ್ವನಿನಾ ಸಹ ತತ್ತ್ವಮಿತಿ ।**
**ಕ್ರಿಯಯಾ ಸಹ ನಾಮಪದಂ ಸಮಿಯಾತ್**
**ನಿರಪೇಕ್ಷಮುಪೈತ್ಯನಯಾ ಹಿ ಯುಜಾಮ್ ॥ ೭೭**

(**ಈ** ಶ್ಲೋಕದ ಮೊದಲನೆಯ ಸಾಲಿನಲ್ಲಿ " **ಪ್ರಥಮಂ** " ಎಂದೂ, ಎರಡನೆಯ ಸಾಲಿನಲ್ಲಿ "**ಪಶ್ಚಾತ್**" ಎಂದೂ-ಅಧ್ಯಾಹಾರ ಮಾಡಿಕೊಳ್ಳಬೇಕು). ಮೊದಲು ಮಹಾವಾಕ್ಯದಲ್ಲಿ ತ್ವಂ + ಅಸಿ ಎಂಬೆರಡು ಶಬ್ದಗಳು ಸಂಬಂಧವನ್ನು ಪಡೆಯುತ್ತವೆ. ಅನಂತರ ತತ್ ಪದದೊಡನೆ ಸಂಬಂಧವಾಗಿ ತತ್ + ತ್ವಂ + ಅಸಿ ಎಂದು ವಾಕ್ಯವಾಗುತ್ತದೆ. ಏಕೆಂದರೆ, ಈ ನಾಮಪದವು ಅನ್ಯನಿರಪೇಕ್ಷವಾಗಿ ಕ್ರಿಯೆಯೊಡನೆ ಸಂಬಂಧವನ್ನು ಪಡೆಯಬಲ್ಲದು. ( ತ್ವಂ ತತ್ ಅಸಿ ಎಂದು ಅನ್ವಯ).

**ವಿವರಣೆ** :-ಮಹಾವಾಕ್ಯದಲ್ಲಿ "**ತತ್ತ್ವಂ**"ಎಂಬ ಎರಡು ಪದಗಳು ಮಾತ್ರವಲ್ಲ. "**ಅಸಿ**" ಎಂಬ ಕ್ರಿಯಾ ಪದವೂ ಇದೆ. ವಿಪರೀತಾರ್ಥವನ್ನು ಹೇಳಲು ಈ ಕ್ರಿಯಾಪದವು ಅಡ್ಡಿಯಾಗುತ್ತದೆಂದು ಈಗ ಪ್ರತಿಪಾದಿಸುತ್ತಿದ್ದಾರೆ. ನಾಮಪದಕ್ಕೆ ಮಾದಲು ಕ್ರಿಯಾಪದದೊಡನೆ ಅನ್ವಯ ಸಹಜವಾಗಿ ಆಗುತ್ತದೆ. ಅನಂತರ ಆಕಾಂಕ್ಷಾವಶದಿಂದ ಅನ್ಯಪದಗಳೊಡನೆ ಸಂಬಂಧವಾಗುತ್ತದೆ. ತ್ವಂ=ನೀನು **ಅಸಿ**= ಆಗಿದ್ದೀಯೆ ಎಂದು ಮೊದಲು ಅನ್ವಯ. ಆಮೇಲೆ ಏನಾಗಿದ್ದೀಯೆ ? ಎಂಬ ಆಕಾಂಕ್ಷೆ ಬಂದಾಗ, **ತತ್ಅಸಿ**=ಆ ಪರಬ್ರಹ್ಮ ಆಗಿದ್ದಿಯೆ ಎಂದು ಅರ್ಥವಾಗುತ್ತದೆ. **ತತ್** ಪದದೊಡನೆ ಸಂಬಂಧ ಆಮೇಲೆ ಬರುತ್ತದೆ. **ತತ್** ಪದಕ್ಕೆ ಮಾತ್ರ '**ಅಸಿ**' ಎಂಬುದರೊಡನೆ ಮೊದಲು ಸಂಬಂಧವಾಗುವುದಿಲ್ಲ. ಏಕೆಂದರೆ ಇಲ್ಲಿ **ಅಸಿ** ಎಂಬುದು ಮಧ್ಯಮ ಪುರುಷದಲ್ಲಿದೆ. **ತತ್ಅಸಿ** ಎಂಬುದು ವ್ಯಾಕರಣ ಶಾಸ್ತ್ರದಂತೆ ತಪ್ಪಾಗುತ್ತದೆ. ವಿಪರೀತಾರ್ಥವನ್ನು ಹೇಳತಕ್ಕವನು **ತತ್**=ಆ ಬ್ರಹ್ಮವು ತ್ವಂ=ನೀನು **ಅಸಿ**= ಆಗಿದ್ದೀಯೆ ಎನ್ನಬೇಕಾಗುತ್ತದೆ. ಇದು ವ್ಯಾಕರಣ ವಿರುದ್ಧವಾಗುವುದಲ್ಲದೆ, ಹಾಗೆ ಅನ್ವಯಕ್ರಮವೂ ತಪ್ಪೆಂದು ಇಲ್ಲಿ ಹೇಳುತ್ತಿದ್ದಾರೆ.

ನ ಹಿ ನಾಮಸಹಸ್ರಮಪಿ ಕ್ರಿಯಯಾ
ರಹಿತಂ ಕಿಮಪಿ ಪ್ರತಿಪಾದಯತಿ ।
ಪ್ರತಿಪಾದಕಮೇಷು ಲಿಙಾದಿ ಭವೇತ್
ವಿಹಿತಾದಿಮತೇರ್ಜನಕಂ ಹಿ ಯತಃ ॥ ೭೮

ಕ್ರಿಯಾಪದವಿಲ್ಲದಿದ್ದರೆ ಸಾವಿರ ನಾಮಪದಗಳು ಸೇರಿದರೂ ಪೂರ್ಣವಾದ ಯಾವ ಅರ್ಥವನ್ನು ಪ್ರತಿಪಾದಿಸಲಾರವು. ಪೂರ್ಣತೆಯನ್ನು ಪ್ರತಿಪಾದಿಸತಕ್ಕದ್ದು ಲಿಙ್ ಮೊದಲಾದ ಪ್ರತ್ಯಯಗಳು. (ಈ ಪ್ರತ್ಯಯಗಳು ಕ್ರಿಯಾವಾಚಕದ ಮೇಲೆ ಮಾತ್ರ ಬರುತ್ತವೆ.) ಈ ಪ್ರತ್ಯಯಗಳೇ ವಿಧಿ, ಪ್ರಾರ್ಥನೆ, ಮುಂತಾದ ಅರ್ಥವನ್ನು ಕೊಡುತ್ತವೆ.

ವಾಕ್ಯದಲ್ಲಿ ಕ್ರಿಯಾಪದವು ಮುಖ್ಯವಾದದ್ದು, ವಿಧಿನಿಷೇಧಾದಿಗಳು ಕ್ರಿಯೆಯ ಜೊತೆಗೆ ಬರತಕ್ಕವು. ಆದ್ದರಿಂದ ಮುಖ್ಯವಾದ ಕ್ರಿಯಾಪದದೊಡನೆ ನಾಮಪದಕ್ಕೆ ಮೊದಲು ಅನ್ವಯವೆಂದು ತಾತ್ಪರ್ಯ.

ಭಗವಾನಪಿ ಮಧ್ಯಮಮೇವ ಯತೋ
ವಿನಿಯಚ್ಛತಿ ಯುಷ್ಮದಿ ನಿತ್ಯಮತಃ ।
ಪ್ರಥಮಂ ತ್ವಮಸೀತಿ ಪದೇ ಸಮಿತ –
ಶ್ಚರಮಂ ತ್ವಸಿನಾ ಸಮಿಯಾತ್ತದಿತಿ ॥ ೭೯

ಭಗವಾನ್ ಪಾಣಿನಿಯೂ ಸಹ ಯುಷ್ಮಚ್ಛಬ್ದದ ಯೋಗವಿದ್ದಲ್ಲಿ ನಿತ್ಯವಾಗಿ ಮಧ್ಯಮ ಪುರುಷವೇ ಧಾತುವಿಗೆ ಬರಬೇಕೆಂದು ನಿಯಮಿಸಿದ್ದಾನೆ. ಆದಕಾರಣ **ತ್ವಂ+ಅಸಿ** ಎಂಬ ಪದಗಳು ಮೊದಲು ಅನ್ವಿತವಾಗುತ್ತವೆ. ಅನಂತರ (ಆಕಾಂಕ್ಷಾ ವಶದಿಂದ) ಅಸಿ ಪದದೊಡನೆ ತತ್ ಎಂಬುದು ಸೇರಿಕೊಳ್ಳುತ್ತದೆ.

**ವಿವರಣೆ :–"ಯುಷ್ಮದ್ಯುಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ"** – ಎಂಬುದು ಪಾಣಿನಿಸೂತ್ರ. **ತ್ವಂ** ಎಂಬುದು **ಯುಷ್ಮತ್** ಶಬ್ದ. **ಅಸಿ** ಎಂಬಲ್ಲಿ **ಅಸ್** ಧಾತುವಿನಮೇಲೆ ಮಧ್ಯಮಪುರುಷ ಪ್ರತ್ಯಯ ಬಂದಿದೆ. **ತ್ವಮಸಿ** ನೀನು ಆಗಿದ್ದಿಯೆ–ಎಂದರ್ಥ. ಏನು ಆಗಿದ್ದೀಯೆ ? ಎಂಬ ಆಕಾಂಕ್ಷೆ ಬಂದಾಗ **ತತ್** ಪದವು ಸೇರಿಕೊಂಡು **ತತ್**=ಆ ಬ್ರಹ್ಮವಸ್ತು ಆಗಿದ್ದೀಯೆ ಎಂದು ಆಕಾಂಕ್ಷೆಯನ್ನು ಪೂರ್ಣಮಾಡುತ್ತದೆ.

"ಬ್ರಹ್ಮವೇ ಜೀವವಾಗಿದೆ " ಎಂದು ಪೂರ್ವಪಕ್ಷಿ ಹೇಳಿದ್ದಾನಷ್ಟೆ. ಅವನ ಪ್ರಕಾರ ಮೊದಲು **ತತ್** ಪದಕ್ಕೆ ಕ್ರಿಯಾಪದದೊಡನೆ ಅನ್ವಯವಾಗಬೇಕು.

**"ತತ್** ಆ ಬ್ರಹ್ಮವಸ್ತು ಆಗಿದೆ. ಏನಾಗಿದೆ ? **ತ್ವಂ** ನೀನು (ಜೀವ) ಆಗಿದೆ"–ಎಂದು **ಅರ್ಥ** ಹೇಳಬೇಕು. **ತತ್** ಪದದೊಡನೆ ಕ್ರಿಯಾಪದಕ್ಕೆ ಅನ್ವಯ ಬರಬೇಕಾದರೆ ಪ್ರಥಮ ಪುರುಷವು **ಅಸ್** ಧಾತುವಿನಮೇಲೆ ಬಂದಿರಬೇಕಾಗಿತ್ತು. " **ತತ್ತ್ವಮಸ್ತಿ**" ಎಂದು ಮಹಾವಾಕ್ಯವಿದ್ದಿದ್ದರೆ, ಅದು ಕೂಡುತ್ತಿತ್ತು. ಹಾಗಿಲ್ಲವಾದ್ದರಿಂದ ಪೂರ್ವಪಕ್ಷಿಯು ಹೇಳಿದ್ದು ಸರಿಯಲ್ಲವೆಂದು ತಾತ್ಪರ್ಯ. ಇದನ್ನೇ ಮುಂದಿನ ಎರಡು ಶ್ಲೋಕಗಳಲ್ಲಿ ಸ್ಪಷ್ಟಪಡಿಸಲಾಗಿದೆ–

**ಪುರುಷೋಽಭಿಹಿತಸ್ತ್ವಮಸೀತಿ ಯದಾ**
**ಕಿಮಸಾನಿ ವದೇತಿ ತದಾಭಿಮುಖಃ ।**
**ಶ್ರವಣಾಯ ಭವೇದಣಿಮಾದಿಗುಣಂ**
**ಸದಿತಿ ಪ್ರಕೃತಂ ತದಸೀತಿ ವದೇತ್ ॥** ೮೦

ಶಿಷ್ಯನಾದ ಪುರುಷನನ್ನು ಕುರಿತು ಆಚಾರ್ಯನು ತ್ವಮಸಿ ನೀನು ಆಗಿದ್ದೀಯೆ–ಎಂದು ಹೇಳಿದಾಗ ಶಿಷ್ಯನು " ಏನಾಗಿದ್ದೇನೆ ? ಹೇಳು " ಎಂದು ಶ್ರವಣಕ್ಕೆ ಅಭಿಮುಖನಾಗುತ್ತಾನೆ. ಆಗ ಆಚಾರ್ಯರು, ಅಣಿಮಾದಿ ಗುಣವಿಶಿಷ್ಟವಾಗಿ ಪ್ರಕೃತವಾದ ಯಾವ ಸದ್ವಸ್ತುವುಂಟೋ ಅದನ್ನು ಲಕ್ಷ್ಯದಲ್ಲಿಟ್ಟು "ತತ್ = ಆ ಸದ್ವಸ್ತುವಾಗಿದ್ದೀಯೆ" ಎಂದು ಹೇಳುತ್ತಾರೆ.

**"ಸದೇವ ಸೌಮ್ಯೇದಮಗ್ರ ಆಸೀತ್ "** (ಛಾಂ. ೬–೨–೧) ಎಂಬುದಾಗಿ **ಸತ್** ಎಂಬುದರ ವಿಚಾರ ಪ್ರಕೃತವಾಗಿದೆ. ಅದನ್ನೆಆಧರಿಸಿ " **ಸದಾಯತನಾಃ ಸತ್ ಪ್ರತಿಷ್ಠಾಃ** " (ಛಾಂ. ೬–೮–೭)ಎಂದು **ಸತ್** ಪದಾರ್ಥವೇ ಮುಂದುವರಿದಿದೆ. **"ತತ್ ಸತ್ಯಂ** " (ಛಾಂ. ೬–೮–೭) ಎಂಬಲ್ಲಿಯೂ **ತತ್** ಪದದಿಂದ **ಸತ್** ಪದಾರ್ಥವೇ ಪರಾಮೃಷ್ಟವಾಗಿದೆ. ಆದ್ದರಿಂದ **"ತತ್ ತ್ವಮಸಿ** " (ಛಾಂ. ೬–೮–೭) ಎಂಬಲ್ಲಿಯೂ **ತತ್** ಪದಕ್ಕೆ ಸದ್ವಸ್ತುವೆಂದು ಅರ್ಥ.

**ತ್ವಮಿತಿ ಧ್ವನಿನಾಭಿಹಿತಸ್ಯ ಯತಃ**
**ತದಿತಿ ಶ್ರುತಿವಾಚ್ಯ ಸದಾತ್ಮಕತಾಮ್ ।**
**ಅವದದ್ವಚನಂ ತತ ಏವ ಸತೋ**
**ನ ಹಿ ಜೀವಸತತ್ತ್ವಕತಾಂ ವದತಿ ॥** ೮೧

**ತ್ವಂ** = ನೀನು ಎಂಬ ಶಬ್ದದಿಂದ ಲಕ್ಷ್ಯಾರ್ಥವಾದ ಯಾವ ಅಂತರಾತ್ಮವು ಅಭಿಹಿತವಾಗಿದೆಯೋ ಅದಕ್ಕೆ **ತತ್** = ಅದು ಎಂಬ ಶಬ್ದದಿಂದ ಬೋಧಿತವಾದ **ಸತ್** ಸ್ವರೂಪವನ್ನು ' **ತತ್ತ್ವಮಸಿ** ' ಎಂಬ ವಚನವು ತಿಳಿಸಿಕೊಟ್ಟಿದೆ. ಆದ್ದರಿಂದ

ಸದ್ವಸ್ತುವು ಜೀವಸ್ವರೂಪವಾಗಿದೆ ಎಂದು ಅದು ಹೇಳುವುದಿಲ್ಲ. (ಜೀವವು ಪರಮಾರ್ಥದಲ್ಲಿ ಸದ್ವಸ್ತುವಾಗಿದೆ ಎಂದು ಹೇಳುತ್ತದೆ.)

**ಟಿಪ್ಪಣಿ** :–ಈ ಶ್ಲೋಕದಲ್ಲಿ ' ಜೀವಸತತ್ತ್ವಕತಾ ' ಎಂದರೆ ಜೀವಾತ್ಮಕತಾ ಎಂದು ಅರ್ಥ. ಧ್ವನಿ, ಶ್ರುತಿ–ಎಂಬ ಶಬ್ದಗಳಿಗೆ ಇಲ್ಲಿ ಶಬ್ದವೆಂದರ್ಥ.

**ವಿಷಯಾಭಿಮುಖಾನಿ ಶರೀರಭೃತಃ**
**ಸ್ವರಸೇನ ಸದಾ ಕರಣಾನಿ ಯತಃ ।**
**ಸ್ವಕಮೇಷ ನ ರೂಪಮವೈತಿ ತತಃ**
**ಪ್ರತಿಬೋಧ್ಯತ ಏವ ತತೋ ವಚನೈಃ ॥** ೮೨

ದೇಹಧಾರಿಯಾದ ಜೀವನ ಇಂದ್ರಿಯಗಳು ಸಹಜವಾಗಿ ಯಾವಾಗಲೂ ಶಬ್ದಾದಿವಿಷಯಗಳ ಕಡೆಗೆ ಧಾವಿಸುತ್ತ ಇರುತ್ತವೆ. ಆದ್ದರಿಂದ ಜೀವನು (ಅಂತರ್ಮುಖನಾಗಿ) ತನ್ನ ನಿಜಸ್ವರೂಪವನ್ನು ತಿಳಿದುಕೊಳ್ಳುವುದಿಲ್ಲ. ಆದ್ದರಿಂದ ಶ್ರುತಿವಾಕ್ಯಗಳು ಆತನ ಸದ್ರೂಪವನ್ನು ನಿಶ್ಚಯವಾಗಿಯೂ ತಿಳಿಸಿಕೊಡುತ್ತವೆ.

**ಟಿಪ್ಪಣಿ** :–ಮನುಷ್ಯನು ವಿಷಯಾಭಿಲಾಷಿಯಾದ್ದರಿಂದ ತನ್ನ ಸ್ವರೂಪವನ್ನು ಮರೆತಿದ್ದಾನೆ. ವೇದವಾಕ್ಯಗಳು ಅವನ ಹಿತದೃಷ್ಟಿಯಿಂದ ನಿಜಸ್ವರೂಪವನ್ನು ತಿಳಿಸಿಕೊಡಲು ಪ್ರವೃತ್ತವಾಗಿವೆ. ಸದ್ವಸ್ತುವಾದ ಬ್ರಹ್ಮವೇ ಜೀವರೂಪವಾಗಿದೆ–ಎಂದು ಅರ್ಥಮಾಡಿದರೆ, ಆತನ ಹಿತಕ್ಕಾಗಿ ಏನನ್ನೂ ತಿಳಿಸಿಕೊಟ್ಟಂತಾಗುವುದಿಲ್ಲ. ಆದ್ದರಿಂದ ' **ತತ್ತ್ವಮಸಿ** ' ಎಂಬ ಮಹಾವಾಕ್ಯಕ್ಕೆ ' ಆ ಬ್ರಹ್ಮವು ನೀನಾಗಿದ್ದೀಯೆ '. 'ಬ್ರಹ್ಮವು ಜೀವವಾಗಿದೆ ' ಎಂದು ತಲೆಕೆಳಕಾಗಿ ಅರ್ಥಮಾಡಬಾರದು. ' ನೀನು ಬ್ರಹ್ಮವೇ ಆಗಿದ್ದೀಯೆ ' ಎಂದೇ ಅರ್ಥಮಾಡಬೇಕು.

**ವಚನಂ ಚ ' ಪರಾಂಚಿ ' ಪುರಃಸರಕಂ**
**ಬಹುವೈದಿಕಮತ್ರ ತಥಾ ಸ್ಮರಣಮ್ ।**
**ವಿಷಯೇಷು ಚ ನಾವಮಿವಾಂಭಸಿ ಯತ್**
**ಮನಸೇಂದ್ರಿಯರಶ್ಮಿ ವಿನಿಗ್ರಹವತ್ ॥** ೮೩

' ಇಂದ್ರಿಯಗಳು ಬಹಿರ್ಮುಖವಾಗಿರುತ್ತವೆ' ಎಂಬ ವಿಷಯದಲ್ಲಿ ' **ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ** ' (ಕಠ–೨–೧–೧) ಮುಂತಾದ ಅನೇಕ ವೈದಿಕ ವಚನಗಳು ಪ್ರಮಾಣವಾಗಿರುತ್ತವೆ. ಹಾಗೆಯೇ 'ವಾಯುರ್ನಾವಮಿವಾಂಭಸಿ' (ಗೀತಾ ೨–೬೭), ' ಮನಸೈವೇಂದ್ರಿಯಗ್ರಾಮಂ ' (ಗೀತಾ ೬–೨೪), 'ಬುದ್ಧ್ಯಾಧೃತಿಗೃ

**ಹೀತಯಾ** ' (ಗೀತಾ ೬–೨೫)–ಇತ್ಯಾದಿ ಸ್ಮೃತಿ ವಚನಗಳೂ ಮನಸ್ಸೆಂಬ ಹಗ್ಗದಿಂದ ಇಂದ್ರಿಯಗಳೆಂಬ ಕುದುರೆಗಳನ್ನು ನಿಗ್ರಹಿಸಬೇಕೆಂಬ ವಚನಗಳೂ ಇವೆ.

**ಇಯತಾ ಹಿ ನ ದೇಹಭೃತೋಽಸ್ತಿ ಭಿದಾ**
**ಪರಮಾತ್ಮ ದೃಶೇರಿತಿ ವಾಚ್ಯಮಿದಮ್ ।**
**ಸ್ಥಿತಿಕಾಲ ಇಹಾಪಿ ಚ ಸೃಷ್ಟಿಮುಖೇ**
**ಸದನನ್ಯತಯಾ ಶ್ರುತ ಏವ ಯತಃ ॥** **೮೪**

ದೃಕ್‌ಸ್ವರೂಪನಾದ ಪರಮಾತ್ಮನಿಗೂ ಜೀವನಿಗೂ ಭೇದವಿಲ್ಲವೆಂಬುದಕ್ಕೆ 'ತತ್ತ್ವಮಸಿ' ಎಂಬ ವಾಕ್ಯವಷ್ಟೇ ಆಧಾರ–ಎಂಬುದಾಗಿ ಹೇಳಕೂಡದು. ಏಕೆಂದರೆ, ಸ್ಥಿತಿಕಾಲದಲ್ಲಿಯೂ ಸೃಷ್ಟಿ ಕಾಲದಲ್ಲಿಯೂ ಸಹ ಜೀವನು ಸದ್‌ವಸ್ತುವಿಗೆ ಅಭಿನ್ನ ನೆಂದೇ ಶ್ರುತಿವಚನ ಉಂಟು.

**ವಿವರಣೆ** :–ಜೀವಾತ್ಮಪರಮಾತ್ಮರಿಗೆ ಅಭೇದವನ್ನು ಹೇಳತಕ್ಕ ವಚನಗಳು ಅಸಂಖ್ಯವಾಗಿವೆ. " ಬ್ರಹ್ಮೈವ ಸನ್‌ಬ್ರಹ್ಮಾಪ್ಯೇತಿ, **ಅಯಮಾತ್ಮಾಬ್ರಹ್ಮ** , **ಅಹಂ ಬ್ರಹ್ಮಾಸ್ಮಿ ವಿಮುಕ್ತಶ್ಚ ವಿಮುಚ್ಯತೇ** " ಮುಂತಾದ ಶ್ರುತಿವಾಕ್ಯಗಳು ಸ್ಥಿತಿ ಕಾಲದಲ್ಲಿ ಅಭೇದವನ್ನು ಬೋಧಿಸುತ್ತವೆ. " **ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ**, ಬಹು **ಸ್ಯಾಂ ಪ್ರಜಾಯೇಯೇತಿ, ಸದೇವ ಸೌಮ್ಯ ಇದಮಗ್ರ ಆಸೀತ್** " ಇತ್ಯಾದಿ ಶ್ರುತಿವಾಕ್ಯಗಳು ಸೃಷ್ಟಿಕಾಲದಲ್ಲಿಯೇ ಅಭೇದವನ್ನು ಬೋಧಿಸುತ್ತವೆ.

ಮೇಲ್ಕಂಡ ಶ್ಲೋಕದಲ್ಲಿ ' **ಸ್ಥಿತಿಕಾಲ ಇವಾಪಿ ಚ ಸೃಷ್ಟಿಮುಖೇ** ' ಎಂದು ಮೂಲಪಾಠವಿದ್ದಿರಬಹುದೆಂದು ತೋರುತ್ತದೆ. 'ಸ್ಥಿತಿಕಾಲದಲ್ಲಿ ಹೇಗೋ ಹಾಗೆ ಸೃಷ್ಟಿಕಾಲದಲ್ಲಿಯೂ ' ಎಂದು ಅದರ ಅರ್ಥ. '**ಚ**' ಶಬ್ದದಿಂದ ಭವಿಷ್ಯತ್ಕಾಕಾಲದ ಲ್ಲಿಯೂ ಅಭೇದವೇ ಎಂದರ್ಥ.

**ದ್ವಯಮಪ್ಯವಿರೋಧಿ ಶರೀರಭೃತೋ**
**ವಚನೀಯಮಿದಂ ರಘುನಂದನವತ್ ।**
**ಉಪದೇಶಮಪೇಕ್ಷ್ಯ ಸದಾತ್ಮಮತಿಃ**
**ಪರಮಾತ್ಮಸತತ್ತ್ವಕತಾ ಚ ಸದಾ ॥** **೮೫**

ಜೀವನಿಗೆ ಉಪದೇಶವಾದ ಮೇಲೆ ತಾನು ಸದ್ರೂಪನೆಂಬ ಬುದ್ಧಿಯುಂಟಾಗು ವುದಕ್ಕೂ ಆತನು ಸದಾ ಸದ್ರೂಪನೇ ಆಗಿದ್ದಾನೆಂಬುದಕ್ಕೂ ವಿರೋಧವೇನೂ ಇಲ್ಲ.

ಈ ಎರಡು ಮಾತುಗಳೂ ಸರಿಯಾಗಿಯೇ ಇವೆ. ಇದಕ್ಕೂ ಶ್ರೀರಾಮನೇ ದೃಷ್ಟಾಂತವಾಗಿದ್ದಾನೆ.

**ವಿವರಣೆ** :- ತಾನು ವಾಸ್ತವದಲ್ಲಿ ಪರಮಾತ್ಮನೇ ಆಗಿದ್ದರೆ, ಆ ವಿಷಯ ತನಗೆ ತಿಳಿದೇ ಇರಬೇಕು. ಅದನ್ನು ಇನ್ನೊಬ್ಬನು ತಿಳಿಸಿಕೊಡಬೇಕಾದ ಪ್ರಸಂಗ ಎಲ್ಲಿದೆ? ಎಂಬ ಆಕ್ಷೇಪಕ್ಕೆ ಇದು ಉತ್ತರ. ತನ್ನ ಸ್ವರೂಪವೇನೆಂಬುದನ್ನು ಮನುಷ್ಯನು ಅಜ್ಞಾನನಿಮಿತ್ತವಾಗಿ ತಿಳಿದುಕೊಂಡಿಲ್ಲ. ಅದನ್ನು ಆಚಾರ್ಯನು ತಿಳಿಸಿಕೊಡುವುದು ನ್ಯಾಯವಾಗಿಯೇ ಇದೆ. ವಾಲ್ಮೀಕಿರಾಮಾಯಣದಲ್ಲಿ ಸೀತೆಯ ಅಗ್ನಿಪ್ರವೇಶ ಸಂದರ್ಭದಲ್ಲಿ ದೇವತೆಗಳು ಬಂದು ಶ್ರೀರಾಮನು ಪರಮಾತ್ಮನೆಂದು ಸ್ತುತಿಸುತ್ತಾರೆ. ಆಗ ಶ್ರೀರಾಮನು "ನಾನು ಮನುಷ್ಯ, ದಶರಥನ ಮಗ" ಎನ್ನುತ್ತಾನೆ. ಆಗ ಬ್ರಹ್ಮನು ಶ್ರೀರಾಮನ ನಿಜಸ್ವರೂಪವನ್ನು ತಿಳಿಸಿಕೊಡುತ್ತಾನೆ. (ಯುದ್ಧ. ಸರ್ಗ ೧೨೦)

ಶ್ರೀರಾಮನು ಅಜ್ಞನಂತೆ ನಟಿಸಿದ್ದಾನೆ, ಮನುಷ್ಯನು ಅಜ್ಞನೇ ಆಗಿದ್ದಾನೆ ಎಂಬುದಿಷ್ಟೇ ಭೇದ.

> **ಸದುಪಾಸನಮಸ್ಯ ವಿಧೇಯತಯಾ**
> **ವಚನಸ್ಯ ಮಮ ಪ್ರತಿಭಾತಿ ಯತಃ ।**
> **ಅತ ಏವ ನ ಜೀವಸದಾತ್ಮಕತಾಂ**
> **ಪ್ರತಿಬೋಧಯತೀತ್ಯವದತ್ ತದಸತ್ ॥** ೮೬

ಹಿಂದೆ ಪೂರ್ವ ಪಕ್ಷಿಯು " ತತ್ತ್ವಮಸಿ " ಎಂಬ ವಚನವು ಜೀವದಲ್ಲಿ ಬ್ರಹ್ಮದೃಷ್ಟಿಯನ್ನಿಟ್ಟು ಸದುಪಾಸನೆ ಮಾಡಬೇಕೆಂದು ಉಪಾಸನಾವಿಧಿಯಾಗಿ ನನಗೆ ತೋರುತ್ತದೆ. ಆದ್ದರಿಂದ ಈ ವಚನವು ಜೀವ-ಬ್ರಹ್ಮರಿಗೆ ಅಭೇದವನ್ನು ಬೋಧಿಸುವುದಿಲ್ಲ ಎಂದು ಹೇಳಿದ್ದನು (ಶ್ಲೋ ೪೬). ಅದು ಅಯಕ್ತವಾದದ್ದು.

ಇದು ಉಪಾಸನಾವಿಧಿಯಲ್ಲವೆಂದು ಹಿಂದೆ (ಶ್ಲೋ-೭೩) ಪ್ರತಿಪಾದಿಸಲಾಗಿದೆ. ಅದನ್ನೇ ಈಗ ಸಿಂಹಾವಲೋಕನ ನ್ಯಾಯದಿಂದ ಮತ್ತೆ ಮುಂದಿನ ಶ್ಲೋಕಗಳಲ್ಲಿ ವಿವರಿಸಲಾಗುತ್ತದೆ.

> **'ಸದುಪಾಸ್ವ' ಇತಿ ಶ್ರುತಿರತ್ರ ನ ತೇ**
> **ತದಸಿ ತ್ವಮಿತಿ ಶ್ರುತಿರೇವಮಿಯಮ್ ।**
> **ಯತ ಏವಮತೋ ನ ವಿಧಿತ್ಸಿತತಾ**
> **ಸದುಪಾಸನಕರ್ಮಣಿ ಇತ್ಯಮೃಷಾ ॥** ೮೭

ಸದ್‌ಬ್ರಹ್ಮವನ್ನು ಉಪಾಸನೆ ಮಾಡು–ಎಂದು ಉಪಾಸನಾಬೋಧಕವಾದ ಶಬ್ದವು ಪೂರ್ವಪಕ್ಷಿಯಾದ ನಿನಗೆ ಇಲ್ಲಿ ದೊರಕುವುದಿಲ್ಲ. ಅದಕ್ಕೆ ಬದಲಾಗಿ, ಸದ್‌ಬ್ರಹ್ಮವು ನೀನು ಆಗಿದ್ದೀಯೆ–ಎಂದು ' ಅಸಿ ' ಶಬ್ದವೇ ಇಲ್ಲಿ ದೊರಕುತ್ತದೆ. ಆದ್ದರಿಂದ ಇಲ್ಲಿ ಉಪಾಸನಾವಿಧಿಯು ವಿವಕ್ಷಿತವಲ್ಲವೆಂಬುದೇ ಸತ್ಯ.

**ಯದಿ ತಸ್ಯ ಕುತಶ್ಚಿದಿಹಾನಯನಂ**
**ಕ್ರಿಯತೇ ತದನರ್ಥಕಮೇವ ಭವೇತ್ ।**
**ಪುರುಷೇಣ ಕೃತಸ್ಯ ಯತಃ ಶ್ರುತಿತಾ**
**ನ ಭವೇದಿತಿ ವೇದವಿದಾಂ ಸ್ಮರಣಮ್ ॥** ೮೮

ಒಂದು ವೇಳೆ ಬೇರೆ ಪ್ರಕಾರದಿಂದ ವಿಧಾಯಕ ಶಬ್ದವನ್ನು ಇಲ್ಲಿಗೆ ತಂದು ಸೇರಿಸುವುದಾದರೆ, ಅದು ವ್ಯರ್ಥವೇ ಆಗುತ್ತದೆ. ಏಕೆಂದರೆ, ಪುರುಷನು ಹೊಸದಾಗಿ ಸೇರಿಸಿದ್ದಕ್ಕೆ ವೇದತ್ವವು ಬರುವುದಿಲ್ಲವೆಂದು ವೇದವಿದರು ಸ್ಮರಿಸಿದ್ದಾರೆ.

**ವಿವರಣೆ :–** ಅಧ್ಯಾಹಾರದಿಂದಲೋ ವಾಕ್ಯಭೇದದಿಂಲೋ ಉಪಾಸನಾ ವಿಧಿಪರವಾದ ಶಬ್ದವನ್ನೋ ವಾಕ್ಯವನ್ನೋ ಇಲ್ಲಿ ಸೇರಿಸಿಹೊಳ್ಳಬಹುದಲ್ಲ–ಎಂಬ ಶಂಕೆಗೆ ಇದು ಉತ್ತರ. ವೇದವು ಅಪೌರುಷೇಯವಾದದ್ದು. ನಾವು ಹೊಸದಾಗಿ ಸೇರಿಸಿ ಕೊಂಡಿದ್ದು ವೇದವೆನಿಸುವುದಿಲ್ಲ–ಎಂದು ಶಾಸ್ತ್ರಜ್ಞರು ಹೇಳಿದ್ದಾರೆ. ಆದ್ದರಿಂದ ಹೊಸದಾಗಿ ನಾವು ಸೇರಿಸುವುದು ಅಯುಕ್ತ.

**ಕಿಮರೇ! ಪುರುಷಂ ಪ್ರತಿಬೋಧಯಿತುಂ**
**ಸ್ವಕಮರ್ಥಮಶಕ್ತಮಿದಂ ವಚನಮ್ ।**
**ಯದತೋಽನ್ಯತ ಆನಯನಂ ಕ್ರಿಯತೇ**
**ಭವತಾ ಶ್ರವಣೇನ ವಿನಾಪಿ ವಿಧೇಃ ॥** ೮೯

ಏನಯ್ಯ ! " ತತ್ತ್ವಮಸಿ " ಎಂಬ ಈ ಶ್ರುತಿವಾಕ್ಯವು ಅಧಿಕಾರಿ ಪುರುಷನಿಗೆ ತನ್ನ ಅರ್ಥವನ್ನು ನೇರವಾಗಿ ಬೋಧಿಸಲು ಅಸಮರ್ಥವೆಂದು ಭಾವಿಸಿದ್ದಿಯಾ ? ವಿಧಿವಾಚಕಶಬ್ದವು ಇದರಲ್ಲಿಲ್ಲದಿದ್ದರೂ ಯಾವ ಕಾರಣಕ್ಕಾಗಿ ಅದನ್ನು ಅಧ್ಯಾಹಾರಾ ದಿಗಳಿಂದ ಇಲ್ಲಿ ತಂದು ಸೇರಿಸುತ್ತಿದ್ದೀಯೆ ?

ಒಂದು ವಾಕ್ಯವು ಸ್ವತಃ ಅಪೂರ್ಣವಾಗಿದ್ದರೆ ಅರ್ಥಾನುಗುಣವಾಗಿ ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಉದಾಹರಣೆಗೆ, " ಮುಚ್ಚು " ಎಂದಿಷ್ಟೇ ಹೇಳಿದರೆ 'ಬಾಗಿಲನ್ನು ' ಎಂದೋ ' ಡಬ್ಬದ ಮುಚ್ಚಲನ್ನು ' ಎಂದೋ ಸೇರಿಸಿಕೊಳ್ಳಬೇಕಾ ಗುತ್ತದೆ. ಹಾಗಿಲ್ಲದೆ ' ಬಾಗಿಲನ್ನು ಮುಚ್ಚು ' ಎಂದೇ ಹೇಳಿದಾಗ ಅಧ್ಯಾಹಾರದ

ಆವಶ್ಯಕತೆ ಇಲ್ಲ. ಹಾಗೆಯೇ ‘ ತತ್ತ್ವಮಸಿ ’ ಎಂಬ ವಾಕ್ಯವು ಸ್ವಯಂ ಪೂರ್ಣವಾಗಿರುವಾಗ ಉಪಾಸನಾ ಬೋಧಕಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳ ಬೇಕೆನ್ನುವುದು ಅಯುಕ್ತ.

ಅಧ್ಯಾಹಾರ ಮಾಡಿದರೆ ದೋಷವೂ ಉಂಟು–

**ಶ್ರುತಹಾನಿರಿಹಾಶ್ರುತಕ್ಲೃಪ್ತಿರಪಿ**
**ಶ್ರುತಿವಿತ್ಸಮಯೋ ನ ಭವೇತ್ತು ಯತಃ ।**
**ಶ್ರುತಿಭಕ್ತಿಮತಾ ಶ್ರುತಿವಕ್ತ್ರಗತಂ**
**ಗ್ರಹಣೀಯಮತೋ ನ ತು ಬುದ್ಧಿವಶಾತ್ ॥** ೬೦

ಅಧ್ಯಾಹಾರ ಮಾಡಿದರೆ, ಶ್ರುತಹಾನಿ ಮತ್ತು ಅಶ್ರುತ ಕಲ್ಪನೆ ಎಂಬ ಎರಡು ದೋಷಗಳುಂಟಾಗುತ್ತವೆ. ಹೀಗೆ ಮಾಡುವುದು ವೇದವಿದರ ಸಿದ್ಧಾಂತವಲ್ಲ. ವೇದದಲ್ಲಿ ಭಕ್ತಿಯುಳ್ಳವನು ವೇದಮುಖದಿಂದ ನೇರವಾಗಿ ಉಕ್ತವಾದ್ದನ್ನು ಗ್ರಹಿಸಬೇಕಲ್ಲದೆ, ಸ್ವಬುದ್ಧಿಯಿಂದ ಕಲ್ಪಿಸಿದ ಅರ್ಥವನ್ನು ಗ್ರಹಿಸಬಾರದು.

‘ ತತ್ತ್ವಮಸಿ ’ ಎಂಬುದು ನೇರವಾಗಿ ಜೀವನಿಗೆ ಬ್ರಹ್ಮಾಭೇದವನ್ನು ತಿಳಿಸಿಕೊಡುತ್ತದೆ. ಇದು ಶ್ರುತವಾದ ಅರ್ಥ. ‘ ಜೀವವನ್ನು ಬ್ರಹ್ಮವೆಂದು ಉಪಾಸನೆ ಮಾಡು ’ ಎಂದು ಅಧ್ಯಾಹಾರದಿಂದ ಅರ್ಥಮಾಡಿದರೆ, ಶ್ರುತವಾದ ಅರ್ಥಕ್ಕೆ ಹಾನಿಯೂ ಅಶ್ರುತವಾದ ಉಪಾಸನಾರ್ಥದ ಕಲ್ಪನೆಯೂ ಆಗುತ್ತದೆ. ಇದು ಅಶಾಸ್ತ್ರೀಯವಾದದ್ದು.

ನಾವು ಹೇಳಿದ ಅರ್ಥದಿಂದ ಮಹತ್ತರವಾದ ಪ್ರಯೋಜನ ಉಂಟು–

**ಪುರುಷಸ್ಯ ಶರೀರಗತಾತ್ಮಮತಿಂ**
**ಮೃತಿಸಂಭವಹೇತುಮನರ್ಥಕರೀಮ್ ।**
**ಅಪನೀಯ ಸದಾತ್ಮಮತಿಂ ದಧತೀ**
**ಮಹತೇ ಪುರುಷಸ್ಯ ಹಿತಾಯ ಭವೇತ್ ॥** ೬೧

ಮನುಷ್ಯನಿಗೆ ಶರೀರವೇ ಆತ್ಮವೆಂಬ ಬುದ್ಧಿ ಇರುತ್ತದೆ. ಜನನ ಮರಣಗಳಿಗೆ ಕಾರಣವಾದ್ದರಿಂದ ಈ ಬುದ್ಧಿ ಅನರ್ಥಕರವಾದದ್ದು. ಈ ಬುದ್ಧಿಯನ್ನು ಮಹಾವಾಕ್ಯವು ಹೋಗಲಾಡಿಸಿ ‘ ನಾನು ಸದ್ರೂಪವಾದ ಪರಬ್ರಹ್ಮವೇ ’ ಎಂಬ ಬುದ್ಧಿಯನ್ನುಂಟುಮಾಡಿ ಮನುಷ್ಯನಿಗೆ ಮಹತ್ತರವಾದ ಹಿತವನ್ನುಂಟು ಮಾಡುತ್ತದೆ.

ಮಹಾವಾಕ್ಯಾರ್ಥದ ಜ್ಞಾನದಿಂದ ಅಧ್ಯಾಸವು ತೊಲಗುತ್ತದೆ–

**ವಿನಿವರ್ತತ ಏವ ಶರೀರಗತಾ**
**ವಿಪರೀತಮತಿಃ ಪುರುಷಸ್ಯ ತದಾ ।**
**ವಚನೇನ ತು ತತ್ತ್ವಮಸೀತಿ ಯದಾ**
**ಪ್ರತಿಬೋಧ್ಯತ ಏಷ ತ ಇತ್ಯಪಿ ಚ ॥** ೬೨

ಮನುಷ್ಯನಿಗೆ ' ಶರೀರವೇ ಆತ್ಮ ' ಎಂಬ ವಿಪರೀತ ಬುದ್ಧಿ (ಅಧ್ಯಾಸ) ಇರುತ್ತದೆ. ' ತತ್ತ್ವಮಸಿ ' ಎಂಬ ವಾಕ್ಯದಿಂದ ನೀನು ಯಾರು? –ಎಂಬುದನ್ನು ತಿಳಿಸಿಕೊಟ್ಟಾಗ ಈ ಅಧ್ಯಾಸವು ನಿಶ್ಚಯವಾಗಿ ತೊಲಗುತ್ತದೆ. ಅಲ್ಲದೆ **ಏಷ ತೇ ಅಂತರ್ಯಾಮ್ಯಮೃತಃ.** (ಬೃಹ. ೩–೭–೩) ಇತ್ಯಾದಿ ಶ್ರುತಿವಚನವೂ ನಿಜ ಸ್ವರೂಪವನ್ನು ಹೀಗೆಯೇ ತಿಳಿಸಿಕೊಡುತ್ತದೆ.

ಅಧ್ಯಾಸ ನಿವೃತ್ತಿಯಾಗದೆ ಸಂಸಾರ ನಿವೃತ್ತಿ ಇಲ್ಲ–

**ಯದಿ ನಾಪನಯೇಚ್ಛ್ರುತಿರಾತ್ಮಮತಿಂ**
**ಪುರುಷಸ್ಯ ಶರೀರಗತಾಮನೃತಾಮ್ ।**
**ತದಹಂಮತಿಹೇತುಕಕರ್ಮಗತಿಂ**
**ಸುಖದುಃಖಫಲಾಮವಶೋಽನುಭವೇತ್ ॥** ೬೩

ದೇಹವು ನಾನೆಂಬ ಮಿಥ್ಯಾಪ್ರತ್ಯಯವನ್ನು–ತಪ್ಪು ತಿಳಿವಳಿಕೆಯನ್ನು ಶ್ರುತಿಯು ತೊಲಗಿಸದೇ ಹೋದರೆ ಮಾನವನಿಗೆ ಸಂಸಾರಗತಿಯು ತಪ್ಪುವುದೇ ಇಲ್ಲ. ದೇಹವು ನಾನೆಂಬ ನಂಬಿಕೆಯಿಂದ ಉಂಟಾಗತಕ್ಕದ್ದು ಸುಖದುಃಖ ಫಲಕವಾದ ಕರ್ಮಗತಿ. ಇದನ್ನು ಬೇರೆ ಗತಿಯಿಲ್ಲದೆ ಮನುಷ್ಯನು ಅನುಭವಿಸಲೇ ಬೇಕಾದೀತು.

ಉಪಾಸನೆಯ ಫಲವು ಮೋಕ್ಷವಲ್ಲ–

**ಯದಿ ತತ್ತ್ವಮಸೀತಿ ವದೇದ್ವಚನಂ**
**ಸದುಪಾಸನಕರ್ಮ ನ ತತ್ತ್ವಮಿತಿ ।**
**ಪುರುಷಸ್ಯ ಫಲಂ ಸದುಪಾಸನತೋ**
**ವಿಮೃಶಾಮಿ ಭವಿಷ್ಯತಿ ಕೀದೃಗಿತಿ ॥** ೬೪

" ತತ್ತ್ವಮಸಿ " ಎಂಬ ವಾಕ್ಯವು ಸದ್ವಸ್ತುವಿನ ಉಪಾಸನಾರೂಪವಾದ ಕರ್ಮವನ್ನು ಬೋಧಿಸುತ್ತದೆಯೆಂದೂ ನೀನೇ ಸದ್ವಸ್ತುವೆಂಬುದಾಗಿ ಬೋಧಿಸುವುದಿಲ್ಲವೆಂದೂ ಹೇಳಿದರೆ, ಆಗ ಸದ್ವಸ್ತುವಿನ ಉಪಾಸನೆಯಿಂದ ಮನುಷ್ಯನಿಗೆ ಯಾವ ಫಲವು ಲಭಿಸುತ್ತದೆಯೆಂಬುದನ್ನು ಈಗ ವಿಮರ್ಶಿಸುವೆನು.

ಪುರುಷಸ್ಯ ತು ಮರ್ತ್ಯಗುಣಸ್ಯ ಭವೇತ್
ಸದುಪಾಸನಯಾ ನ ಸದಾತ್ಮಕತಾ ।
ನ ಕಥಂಚಿದಪಿ ಪ್ರಜಹಾತಿ ಯತಃ
ಪ್ರಕೃತಿಂ ಸಹಜಾಮಿಹ ಕಶ್ಚಿದಪಿ ॥ ೯೫

ಮನುಷ್ಯನು ಸಹಜವಾಗಿ ಮರ್ತ್ಯಗುಣವುಳ್ಳವನು–ಎಂದರೆ–ಜನನ ಮರಣಾದಿ ಸ್ವಭಾವವುಳ್ಳವನು. ಈತನು ಬ್ರಹ್ಮೋಪಾಸನೆ ಮಾಡುವುದರಿಂದ ' ಜನನ ಮರಣಾದಿಗಳಿಂದ ದೂರವಾದ ' ಬ್ರಹ್ಮಸ್ವರೂಪವು ಬಂದು ಬಿಡುವುದಿಲ್ಲ. ಏಕೆಂದರೆ, ಯಾವ ಪಧಾರ್ಥವೂ ಸಹಜವಾದ ತನ್ನ ಸ್ವರೂಪವನ್ನು ಯಾವ ಬಗೆಯಿಂದಲೂ ಬಿಡುವುದಿಲ್ಲ.

ಯದಿ ದೇಹಭೃದೇಷ ಸದಾತ್ಮಕತಾಂ
ಪ್ರಗಮಿಷ್ಯತಿ ವೈ ಸದುಪಾಸನಯಾ ।
ನ ಚ ಹಾಸ್ಯತಿ ರೂಪಮಸೌ ಹಿ ನಿಜಂ
ಯತ ಐಕ್ಯಮತಿರ್ನ ಭವತ್ಯುಭಯೋಃ ॥ ೯೬

ಒಂದು ವೇಳೆ ಈ ಜೀವಾತ್ಮನು ಬ್ರಹ್ಮೋಪಾಸನೆಯಿಂದ ಬ್ರಹ್ಮದ ಸ್ವರೂಪನ್ನು ತಳೆಯುತ್ತಾನೆಂದು ಒಪ್ಪಿದರೂ ಇವನು ತನ್ನ ನಿಜ ಧರ್ಮವಾದ ಜನನ ಮರಣ ಗತಿಯನ್ನು ಮಾತ್ರ ತಪ್ಪಿಸಿಕೊಳ್ಳುವುದಿಲ್ಲ. ಏಕೆಂದರೆ, ಜೀವವೂ ಬ್ರಹ್ಮವೂ ಒಂದೇ ಎಂಬ ಅಭೇದಬುದ್ಧಿಯು ಇವನಿಗೆ ಹುಟ್ಟಿರುವುದಿಲ್ಲ.

ಜೀವನು ಪರಮಾರ್ಥದಲ್ಲಿ ಬ್ರಹ್ಮವೇ ಆಗಿದ್ದರೂ ಅಜ್ಞಾನದಿಂದ ಸಂಸಾರ ಗತಿಯಲ್ಲಿ ತೊಳಲುತ್ತಿದ್ದಾನೆ. ಅಜ್ಞಾನವು ಜ್ಞಾನದಿಂದಲೇ ನಿವೃತ್ತವಾಗುತ್ತದೆ, ಕರ್ಮದಿಂದಲ್ಲ. ಬ್ರಹ್ಮೋಪಾಸನೆಯಿಂದ ಬ್ರಹ್ಮವೇ ಆಗಬಹುದೆಂಬುದು 'ತುಷ್ಯತು ದುರ್ಜನ' ನ್ಯಾಯದಿಂದ ಅಂಗೀಕೃತವಾದರೂ ವಸ್ತುತಃ ಉಪಾಸನೆಯಿಂದ ಬ್ರಹ್ಮವಾಗಲು ಸಾಧ್ಯವಿಲ್ಲವೆಂಬುದು ಸಿದ್ಧಾಂತ. ಅಥವಾ ಮೇಲಿನ ಶ್ಲೋಕದ ಅರ್ಥ ಹೀಗಾಗಬಹುದು. " ಉಪಾಸನೆಯಿಂದ ಜೀವನು ಬ್ರಹ್ಮವಾಗುತ್ತಾನೆಂದು ಹೇಳುವುದಾದರೆ, ಈ ಜೀವನು ತನ್ನ ಜನನ ಮರಣ ಗತಿಯನ್ನು ತಪ್ಪಸಿಕೊಳ್ಳುವುದಿಲ್ಲವಷ್ಟೆ?. ಎಂದು " ಆದ್ದರಿಂದ ಬ್ರಹ್ಮ ಸ್ವರೂಪನ್ನು ಉಪಾಸನೆಯಿಂದ ಪಡೆಯುವುದಿಲ್ಲವೆಂದೇ ತಾತ್ಪರ್ಯ.

**ಟಿಪ್ಪಣಿ** :– ಈ ಶ್ಲೋಕದ ಮೂರನೆಯ ಸಾಲು ಮುದ್ರಿತ ಪ್ರತಿಯಲ್ಲಿ **'ನಜಹಾಸ್ಯತಿ'** 'ನನಹಾಸ್ಯತಿ ' ಎಂದೂ ಇದೆ. ಅದೆರಡೂ ಅಸುದ್ಧವಾದ್ದರಿಂದ ಮೇಲ್ಕಂಡಂತೆ ತಿದ್ದಿಕೊಳ್ಳಲಾಗಿದೆ.

ಜೀವಾತ್ಮನು ಉಪಾಸನೆಯಿಂದ ಪರಮಾತ್ಮನಾಗಬಹುದೆಂದು ಪೂರ್ವಪಕ್ಷ–

**ರಸವಿದ್ಧಮಯಃ ಪ್ರಕೃತಿಂ ಸಹಜಾಂ**
**ಪ್ರವಿಹಾಯ ಯಥಾ ಕನಕತ್ವಮಿಯಾತ್ ।**
**ಪುರುಷೋಽಪಿ ತಥಾ ಸದುಪಾಸನಯಾ**
**ಪ್ರತಿಪತ್ಸ್ಯತ ಏವ ಸದಾತ್ಮಕತಾಮ್ ॥** ೯೭

ರಸೌಷಧವನ್ನು ಸೇರಿಸಿದರೆ ಕಬ್ಬಿಣವು ತನ್ನ ಸ್ವರೂಪವನ್ನು ತ್ಯಜಿಸಿ ಚಿನ್ನವಾಗಿ ಬಿಡುತ್ತದೆ. ಹಾಗೆಯೇ ಸದ್ವಸ್ತುವಾದ ಬ್ರಹ್ಮವನ್ನು ಉಪಾಸನೆ ಮಾಡುವುದರಿಂದ ಜೀವಾತ್ಮನು ಸದ್ರೂಪವನ್ನು ಪಡೆದೇ ಪಡೆಯತ್ತಾನೆ.(ಹೀಗೆಂದು ಏಕೆ ಒಪ್ಪಬಾರದು?)

ಸಿದ್ಧಾಂತಿಯು ಹೇಳುವ ಉತ್ತರ–

**ಅಯಸೋಽವಯವಾನಭಿಭೂಯ ರಸಃ**
**ಸ್ಥಿತವಾನನಲಾನುಗೃಹೀತಿಮನು ।**
**ಕನಕತ್ವಮತಿಂ ಜನಯತ್ಯಯಸಿ**
**ಪ್ರತಿಪನ್ನಮಯೋ ನ ತು ಕಾಂಚನತಾಮ್ ॥** ೯೮

ಕಬ್ಬಿಣವನ್ನು ಬೆಂಕಿಯಿಂದ ಕರಗಿಸಿದಾಗ ಕಬ್ಬಿಣದ ಸೂಕ್ಷ್ಮಾವಯವಗಳನ್ನು ರಸೌಷಧವು ವ್ಯಾಪಿಸಿಕೊಂಡು ಬಿಡುತ್ತದೆ. ಆಗ ಕಬ್ಬಿಣದಲ್ಲಿಯೇ “ ಇದು ಚಿನ್ನ ” ಎಂಬ ಬುದ್ಧಿ ಜನರಿಗೆ ಉಂಟಾಗುತ್ತದೆ. ಇದನ್ನು ಉಂಟುಮಾಡತಕ್ಕದ್ದು ರಸ. ಆದರೆ ಕಬ್ಬಿಣವೇನೂ ಚಿನ್ನವಾಗಿಬಿಡುವುದಿಲ್ಲ!

**ಟಿಪ್ಪಣಿ** :–ಕಬ್ಬಿಣವನ್ನು ಚಿನ್ನವಾಗಿ ಪರಿವರ್ತಿಸಬಹುದೆಂಬ ಒಂದು ನಂಬಿಕೆ ಇತ್ತು. ರಸವೆಂದರೆ ಪಾದರಸ. ಇದಕ್ಕೆ ಯಾವುದೋ ಮೂಲಿಕೆಗಳನ್ನು ಸೇರಿಸಿ ಪರಿಪಾಕ ಮಾಡುವುದರಿಂದ ಚಿನ್ನವಾಗಿ ಪರಿವರ್ತಿಸುವ ಶಕ್ತಿ ರಸಕ್ಕೆ ಬರುತ್ತದೆ,ಎಂದು ಜನರು ತಿಳಿದಿದ್ದರು. ಆಚಾರ್ಯರು ಹೇಳುವುದೇನೆಂದರೆ, ರಸದ ಶಕ್ತಿಯಿಂದ ಕಬ್ಬಿಣದ ಅಣುಗಳು ಹೊಳಪನ್ನು ತಳೆದು ಚಿನ್ನದಂತೆ ಕಾಣುತ್ತವೆಯೇ ಹೊರತು ವಾಸ್ತವವಾಗಿ ಕಬ್ಬಿಣವು ಚಿನ್ನವಾಗುವುದಿಲ್ಲ ಎಂದು.

ಉದಕಾವಯವಾನಭಿಭೂಯ ಪಯೋ
ರಜತಾವಯವಾಂಶ್ಚ ಯಥಾ ಕನಕಮ್ ।
ವಿಪರೀತಮತಿಂ ಜನಯತ್ಯುದಕೇ
ರಜತೇ ಚ ತಥಾಯಸಿ ಹೇಮಮತಿಮ್ ॥ ೯೯

ಹಾಲನ್ನು ನೀರಿಗೆ ಸೇರಿಸಿದರೆ, ಅದು ನೀರಿನ ಕಣಗಳನ್ನು ಆಕ್ರಮಿಸಿ, ನೀರಿನಲ್ಲಿ " ಇದು ಹಾಲು " ಎಂಬ ವಿಪರೀತ ಜ್ಞಾನವನ್ನುಂಟು ಮಾಡುತ್ತದೆ. ಹಾಗೆಯೇ ಚಿನ್ನವನ್ನು ಬೆಳ್ಳಿಗೆ ಸೇರಿಸಿದರೆ ' ಇದು ಚಿನ್ನ ' ಎಂಬ ವಿಪರೀತ ಜ್ಞಾನವನ್ನು ಚಿನ್ನವು ಬೆಳ್ಳಿಯಲ್ಲಿ ಉಂಟುಮಾಡುತ್ತದೆ.

ನೀರಿಗೆ ಹಾಲನ್ನು ಸೇರಿಸಿ " ಇದು ಹಾಲು " ಎಂದು ವಂಚಕರು ಮಾರುತ್ತಾರೆ. ಅಪರಂಜಿಯನ್ನು ಬೆಳ್ಳಿಗೆ ಸೇರಿಸಿದರೆ ಎಲ್ಲವೂ ಚಿನ್ನವೆಂಬ ಭ್ರಮೆ ಹುಟ್ಟುತ್ತದೆ. ಹಾಗೆಯೇ ಕಬ್ಬಿಣಕ್ಕೆ ರಸವನ್ನು ಸೇರಿಸಿದಾಗ ಕಬ್ಬಿಣಕ್ಕೆ ಹೊಳಪು ಬಂದು ಚಿನ್ನವೆಂಬ ಭ್ರಮೆ ಹುಟ್ಟುತ್ತದೆ. ವಾಸ್ತವದಲ್ಲಿ ಕಬ್ಬಿಣವು ಚಿನ್ನವಾಗುವುದಿಲ್ಲವೆಂದು ಅಭಿಪ್ರಾಯ. ಅಣು ಸಂಘಟನೆಯ ವಿನಿಮಯದಿಂದ ಕಬ್ಬಿಣವನ್ನು ಚಿನ್ನವಾಗಿ ಮಾರ್ಪಡಿಸಲು ವಿಜ್ಞಾನಕ್ಕೆ (Science) ಈಗ ಸಾಧ್ಯವಾಗಿದೆಯೆಂದು ಹೇಳಲಾಗಿದೆ. ಆದರೆ ಜೀವಾತ್ಮನು ಅಣುಘಟಿತನಲ್ಲ ಎಂಬುದನ್ನು ನೆನಪಿನಲ್ಲಿಡಬೇಕು.

ರಸವೀರ್ಯವಿಪಾಕವಿನಾಶಮನು-
ಪ್ರವಿನಶ್ಯತಿ ಕಾಂಚನತಾಪ್ಯಯಸಃ ।
ಕೃತಕಂ ಹಿ ನ ನಿತ್ಯಮಿತಿ ಪ್ರಗತಂ
ಸಮವೇತಮವಶ್ಯಮುಪೈತಿ ಯತಃ ॥ ೧೦೦

ಕಬ್ಬಿಣದಲ್ಲಿ ಸೇರಿಕೊಂಡಿದ್ದ ರಸೌಷಧದ ಸಾಮರ್ಥ್ಯವು ಹೋದೊಡನೆ ಕಬ್ಬಿಣದ ಸುವರ್ಣತ್ವವೂ ಹೋಗಿಬಿಡುತ್ತದೆ ! ಕೃತಕವಾದದ್ದು ನಿತ್ಯವಲ್ಲವೆಂದು ಸ್ಪಷ್ಟವಾಗಿ ತಿಳಿದಿರಬೇಕಲ್ಲವೆ? ಹೊಸದಾಗಿ ಬಂದದ್ದು ಅವಶ್ಯ ತೊಲಗುತ್ತದೆ.

ಕೃತಕವು ಶಾಶ್ವತವಲ್ಲ. ಕಬ್ಬಿಣವು ಚಿನ್ನವಾಗುತ್ತದೆಯೆಂಬುದು ಸುಳ್ಳು. ಅದು ವಂಚನೆಯೇ ಸರಿ-ಎಂದು ಆಚಾರ್ಯರ ಅಭಿಪ್ರಾಯ. ಹಾಗೆಯೇ ಜೀವಾತ್ಮನು ಹೊಸದಾಗಿ ಪರಮಾತ್ಮನಾಗುತ್ತಾನೆ-ಎಂದು ಹೇಳಿದರೆ, ಪರಮಾತ್ಮಸ್ಥಿತಿಯಾದ ಮೋಕ್ಷವೂ ಅನಿತ್ಯವೆಂದಾಗಿ ಬಿಡುತ್ತದೆ.

ಅಮೃತತ್ವಮಸತ್ಪುರುಷಾಯ ಯದಿ
ಕ್ರಿಯತೇ ಸದುಪಾಸನಯಾ ಯಜಿವತ್ ।
ಯಜಿಕಾರ್ಯವದಂತವದೇವ ಭವೇತ್
ಕೃತಕಸ್ಯ ಯತೋ ವಿದಿತಾಽಧ್ರುವತಾ ॥ ೧೦೧

ಯಾಗ ಮಾಡಿದರೆ ಸ್ವರ್ಗವು ಬರುವಂತೆ, ಸದುಪಾಸನೆಯಿಂದ ಜೀವಾತ್ಮನಿಗೆ ಈಗ ಇಲ್ಲದಿರುವ ಮೋಕ್ಷವು ಹೊಸದಾಗಿ ಬರುವುದಾದರೆ, ಸ್ವರ್ಗಫಲದಂತೆ ಮೋಕ್ಷವೂ ಅನಿತ್ಯವಾಗಲೇ ಬೇಕಾಗುತ್ತದೆ. ಏಕೆಂದರೆ, ಕೃತಕವು ಅನಿತ್ಯವೆಂದು ಗೊತ್ತಾಗಿದೆ.

ಕ್ರಿಯೆಯಿಂದ ಹುಟ್ಟಿದ್ದು ಕೃತಕ. ಯಾಗಕ್ರಿಯೆಯಿಂದ ಸ್ವರ್ಗಫಲವು ಹುಟ್ಟುತ್ತದೆ. **"ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ"** ಎಂಬಂತೆ ಸ್ವರ್ಗವು ಅನಿತ್ಯವಾದದ್ದು. ಕೃತಕವಾದ ಗಡಿಗೆ, ಬಟ್ಟೆ, ಮನೆ, ಮಠ–ಇವೆಲ್ಲ ಅನಿತ್ಯವೆಂಬುದು ನಿಶ್ಚಿತವಾದದ್ದು. ಉಪಾಸನಾಕ್ರಿಯೆಯಿಂದ ಮೋಕ್ಷವು ಹೊಸದಾಗಿ ಲಭಿಸುವುದಾದರೆ ಅದೂ ಅನಿತ್ಯವಾಗಬೇಕಾಗುತ್ತದೆ. ಮೋಕ್ಷವು ಅನಿತ್ಯವಲ್ಲವೆಂಬುದು ಸಿದ್ಧಾಂತ. ಆದಕಾರಣ ಉಪಾಸನೆಯಿಂದ ಮೋಕ್ಷ ಬರುತ್ತದೆಯೆನ್ನುವುದು ಯುಕ್ತವಲ್ಲ.

ಪುರುಷಸ್ಯ ಸತಶ್ಚ ವಿಧರ್ಮಕಯೋಃ
ಸದುಪಾಸನಯಾ ನ ಭವೇತ್ ಸಮಿತಿಃ ।
ಯದಿ ಸಂಗತಿರಿಷ್ಯತ ಏವ ತಯೋ –
ರವಿಯುಕ್ತತಯಾ ನ ಚಿರಂ ವಸತಃ ॥ ೧೦೨

ಜೀವಾತ್ಮನೂ ಸದ್ವಸ್ತುವೂ ಭಿನ್ನಸ್ವಭಾವದವು. ಸದುಪಾಸನೆಯಿಂದ ಜೀವಾತ್ಮನಿಗೆ ಪರಮಾತ್ಮನೊಡನೆ ಸಂಗಮವಾಗುವುದಿಲ್ಲ. ಒಂದು ವೇಳೆ ಸಂಗಮವಾಗುತ್ತದೆಯೇ ಆದರೆ ಅವರಿಬ್ಬರೂ ಒಟ್ಟಿಗೆ ಬಹುಕಾಲ ಇರಲಾರರು.

**ವಿವರಣೆ** :–ಪೂರ್ವೋಕ್ತಯುಕ್ತಿಗಳಿಂದ ಜೀವನು ಬ್ರಹ್ಮವಾಗಲು ಶಕ್ಯವಿಲ್ಲ. ಜೀವನೂ ಬ್ರಹ್ಮವೂ ಬೇರೆಬೇರೆಯೆಂದೂ ಉಪಾಸನೆಯಿಂದ ಜೀವನು ಬ್ರಹ್ಮನಾಗುತ್ತಾನೆಂದೂ ಉಪಾಸನಾವಾದಿಗಳ ಅಭಿಪ್ರಾಯವಿದೆ. ರಸದಿಂದ ಕಬ್ಬಿಣವು ಚಿನ್ನವಾದಂತೆ, ಒಂದು ವೇಳೆ ಜೀವನು ಉಪಾಸನಾ ಬಲದಿಂದ ಬ್ರಹ್ಮನಂತೆ ಆದಾನೆಂದು ಒಪ್ಪಿದರೂ ಕೃತಕವಾದ ಆ ಸ್ವರೂಪವು ಬಹುಕಾಲ ನಿಲ್ಲುವುದಿಲ್ಲವೆಂದು ತಾತ್ಪರ್ಯ.

ಫಲಮೀದೃಗಿದಂ ಸದುಪಾಸನತಃ
ಪುರುಷಸ್ಯ ಭವಿಷ್ಯತಿ ನಾನ್ಯದತಃ ।
ನ ಚ ತನ್ನಿರವದ್ಯತಯಾಭಿಮತಂ
ವಿದುಷಾಂ ಬಹುದೋಷಸಮೀಕ್ಷಣತಃ ॥ ೧೦೩

ಸದುಪಾಸನೆಯಿಂದ ಜೀವನಿಗಾಗುವ ಫಲವು ಈ ಪ್ರಕಾರ ಅನಿತ್ಯವೇ ಆಗುತ್ತದೆ, ಬೇರೆಯಲ್ಲ. ಆದ್ದರಿಂದ ಈ ಉಪಾಸನಾಪಕ್ಷದಲ್ಲಿ ಬಹಳ ದೋಷಗಳು ಕಂಡುಬರುತ್ತವೆ. ಈ ಮತವು ದೋಷಯುಕ್ತವಾದ್ದರಿಂದ ಸರಿಯಲ್ಲವೆಂದು ವಿದ್ವಾಂಸರ ಅಭಿಪ್ರಾಯವಿದೆ.

ಸದುಪಾಸನಕರ್ಮವಿಧಾನಪರಂ
ನ ಭವೇದತ ಏವ ಹಿ ಸದ್ವಚನಮ್ ।
ಅಹಮಸ್ಮಿ ಶರೀರಮಿದಂ ಚ ಮಮೇ –
ತ್ಯವಿವೇಕಮತಿಂ ವಿನಿವರ್ತಯತಿ ॥ ೧೦೪

ಆದ್ದರಿಂದ 'ತತ್ತ್ವಮಸಿ' ಎಂಬ ವಾಕ್ಯವು ಸದುಪಾಸನೆಯೆಂಬ ಕರ್ಮವನ್ನು ವಿಧಿಸುವುದಕ್ಕಾಗಿ ಹೊರಟಿಲ್ಲ–ಮತ್ತೇನೆಂದರೆ, "ಈ ಶರೀರವೇ ನಾನು, ಇದು ನನ್ನದು" ಎಂಬ ಅವಿವೇಕಬುದ್ಧಿಯನ್ನು ಹೋಗಲಾಡಿಸುವುದಕ್ಕಾಗಿ ಹೊರಟಿದೆ.

ಸಕಲೋಪನಿಷತ್ಸು ಶರೀರಭೃತಃ
ಪರಮಾತ್ಮ ಪದೈಕವಿಭಕ್ತಿತಯಾ ।
ಉಪದೇಶವಚಾಂಸ್ಯನಯೈವ ದಿಶಾ
ಗಮಯೇನ್ಮತಿಮಾನಭಿಯುಕ್ತತಯಾ ॥ ೧೦೫

ಸಕಲ ಉಪನಿಷತ್ತುಗಳಲ್ಲಿಯೂ ಜೀವವಾಚಕ ಪದಕ್ಕೂ ಪರಮಾತ್ಮವಾಚಕ ಪದಕ್ಕೂ ಒಂದೇ ವಿಭಕ್ತಿಯಿದ್ದೆಡೆಯಲ್ಲಿ ಈ ರೀತಿಯಾಗಿ ಎರಡು ಶಬ್ದಾರ್ಥಗಳಿಗೂ ಅಭೇದವನ್ನೇ ಹೇಳಬೇಕು. ಈ ಉಪದೇಶ ವಾಕ್ಯಗಳನ್ನು ಬುದ್ಧಿಶಾಲಿಯಾದವನು ಈ ಪ್ರಕಾರದಲ್ಲಿಯೇ ಯಕ್ತಿಯಕ್ತವಾಗಿ ತಿಳಿದುಕೊಳ್ಳಬೇಕು.

**"ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ, ಅಯಮಾತ್ಮಾ ಬ್ರಹ್ಮ, ಪುರುಷ ಏವೇದಂ"** ಇತ್ಯಾದಿ ವಾಕ್ಯಗಳಲ್ಲಿ ಪದದ್ವಯದಲ್ಲಿಯೂ ಪ್ರಥಮಾವಿಭಕ್ತಿಯೊಂದೇ ಇದೆ. ಆದ್ದರಿಂದ ಇಲ್ಲಿ ಅಭೇದವೇ ತಾತ್ಪರ್ಯ.

ದ್ರವಿಡೋಽಪಿ ಚ ತತ್ತ್ವಮಸೀತಿ ವಚೋ
ವಿನಿವರ್ತಕಮೇವ ನಿರೂಪಿತವಾನ್ ।
ಶಬರೇಣ ವಿವರ್ಧಿತರಾಜಶಿಶೋ –
ರ್ನಿಜಜನ್ಮವಿದುಕ್ತಿ ನಿದರ್ಶನತಃ ॥ ೧೦೬

ದ್ರವಿಡಾಚಾರ್ಯರೂ ಸಹ 'ತತ್ತ್ವಮಸಿ' ಎಂಬ ವಾಕ್ಯವು ಅಜ್ಞಾನನಿವರ್ತಕವೆಂದೇ ಹೇಳಿದ್ದಾರೆ. ಒಬ್ಬ ವ್ಯಾಧನು ರಾಜಪುತ್ರನನ್ನು ಸಾಕಿ ಬೆಳೆಸಿದ್ದನೆಂದೂ ರಾಜಪುತ್ರನ ಜನ್ಮ ಯಾರಿಂದಾಯಿತೆಂಬ ಸತ್ಯವನ್ನು ಬಲ್ಲವನೊಬ್ಬನು ಆ ಮಾತನ್ನು ಹೇಳಿದಾಗ ರಾಜಪುತ್ರನ ಅಜ್ಞಾನವು ತೊಲಗಿತೆಂದೂ ನಿದರ್ಶನನವನ್ನು ಕೊಡುವುದರ ಮೂಲಕ ಈ ವಿಷಯವನ್ನು ತಿಳಿಸಿಕೊಟ್ಟಿದ್ದಾರೆ.

**ವಿವರಣೆ** :–ರಾಜಪುತ್ರನೊಬ್ಬನು ದೈವವಶದಿಂದ ಮಾತಾಪಿತೃವಿಯುಕ್ತನಾಗಿ ಒಬ್ಬ ವ್ಯಾಧನಿಂದ ಪೋಷಿತನಾಗಿದ್ದನು. ಆ ಬಾಲಕನು ತಾನೊಬ್ಬ ವ್ಯಾಧನೆಂದು ತಿಳಿದುಕೊಂಡಿದ್ದನು. ಆತನ ಪೂರ್ವಾಪರವನ್ನು ಬಲ್ಲ ಕಾರುಣಿಕನಾದ ಒಬ್ಬ ಪುರುಷನು "ಅಯ್ಯ, ನೀನು ರಾಜಪುತ್ರ, ವ್ಯಾಧನಲ್ಲ" ಎಂದು ಸತ್ಯವನ್ನರುಹಿದನು. ಅನಂತರ ಆ ಹುಡುಗನು ವ್ಯಾಧಜಾತಿಯ ಕರ್ಮಗಳನ್ನು ಬಿಟ್ಟು ತನ್ನ ರಾಜ್ಯಕ್ಕೆ ಹೋಗಿ ಪರಂಪರೆಯಿಂದ ಬಂದ ರಾಜಪದವಿಯನ್ನನುಭವಿಸಿದನು–ಎಂಬುದು ಕಥೆ.

ಈ ಕಥೆಯನ್ನು ಶ್ರೀ ಶಂಕರಾಚಾರ್ಯರು ಬೃಹದಾರಣ್ಯಕಭಾಷ್ಯದಲ್ಲಿ **"ಅತ್ರ ಚ ಸಂಪ್ರದಾಯವಿದ ಆಖ್ಯಾಯಿಕಾಂ ಸಂಪ್ರಚಕ್ಷತೇ"** ಎಂದು ಬರೆದು ಉದಾಹರಿಸಿದ್ದಾರೆ. ಸಂಪ್ರದಾಯವಿದರೆಂದರೆ ದ್ರವಿಡಾಚಾರ್ಯರೆಂದು ಆನಂದಗಿರಿವ್ಯಾಖ್ಯಾನದಲ್ಲಿ ಹೇಳಿದೆ.

ಯತ ಏವಮತಃ ಸ್ವಶರೀರಗತಾ–
ಮಹಮಿತ್ಯವಿವೇಕಮತಿಂ ಸುದೃಢಾಮ್ ।
ಪ್ರವಿಹಾಯ ಯದಕ್ಷರಮದ್ವಯಕಂ
ತ್ವಮವೇಹಿ ತದಕ್ಷರಮಾತ್ಮತಯಾ ॥ ೧೦೭

ಹೀಗೆ "ತತ್ತ್ವಮಸಿ" ಎಂಬ ಮಹಾವಾಕ್ಯವು ಅಜ್ಞಾನನಿವರ್ತಕವೆಂದು ಸಿದ್ಧವಾಗಿರುವುದರಿಂದ, ಎಲೈ ಶಿಷ್ಯನೆ, ನೀನು ಮಾಡಬೇಕಾದ್ದು ಇಷ್ಟು. ದೇಹವೇ ಆತ್ಮವೆಂಬ ದೃಢವಾದ ಅವಿವೇಕಬುದ್ಧಿಯನ್ನು ಪರಿತ್ಯಜಿಸಿ ಅದ್ವಯವೂ ಅಕ್ಷರವೂ ಆದ ಯಾವ ಆತ್ಮವಿದೆಯೋ ಅದೇ ನಿನ್ನ ಅವ್ಯಯವಾದ ಆತ್ಮವೆಂದು ತಿಳಿದುಕೋ.

ನ ಮನೋ ನ ಮತಿಃ ಕರಣಾನಿ ಚ ನೋ
ನ ರಜೋ ನ ತಮೋ ನ ಚ ಸತ್ತ್ವಮಪಿ ।
ನ ಮಹೀ ನ ಜಲಂ ನ ಚ ವಹ್ನಿರಪಿ
ಶ್ವಸನೋ ನ ನಭಶ್ಚ ಪದಂ ಪರಮಮ್ ॥ ೧೦೮

ಪರಮಪದವಾದ ಆ ಸದ್ವಸ್ತು ಯಾವುದು ? ಅದು ಮನಸ್ಸಲ್ಲ, ಬುದ್ಧಿಯಲ್ಲ, ಇಂದ್ರಿಯಗಳಲ್ಲ, ರಜೋಗುಣವಲ್ಲ, ತಮೋಗುಣವಲ್ಲ, ಸತ್ತ್ವಗುಣವೂ ಅಲ್ಲ, ಭೂಮಿಯಲ್ಲ, ಜಲವಲ್ಲ, ಅಗ್ನಿಯಲ್ಲ, ವಾಯುವಲ್ಲ, ಆಕಾಶವೂ ಅಲ್ಲ.

ಅಮನಸ್ಕಮಧೀಕಮನಿಂದ್ರಿಯಕಂ
ವಿರಜಸ್ಕಮಸತ್ತ್ವತಮಸ್ಕಮಪಿ ।
ಅಮಹೀಜಲವಹ್ನ್ಯನಿಲಾಂಬರಕಂ
ಪರಮಕ್ಷರಮಾತ್ಮತಯಾಶ್ರಯ ಭೋಃ ॥ ೧೦೯

ಅದು ಮನೋಬುದ್ಧಿಗಳಿಂದಲೂ ಇಂದ್ರಿಯಗಳಿಂದಲೂ ರಹಿತವಾದದ್ದು, ಸತ್ತ್ವರಜಸ್ತಮೋಗುಣಗಳು ಅದರಲಿಲ್ಲ. ಭೂಮಿ, ಜಲ, ಅಗ್ನಿ, ವಾಯು, ಆಕಾಶ -ಎಂಬ ಪಂಚಭೂತಗಳೂ ಅದಲ್ಲ. ಅವ್ಯಯವಾದ ಆ ಪರವಸ್ತುವೇ ನೀನೆಂದು ತಿಳಿದುಕೊಳ್ಳಯ್ಯ.

ಅವಸ್ಥಾತ್ರಯವು ಆತ್ಮನಿಗಿಲ್ಲ-

ಕರಣಾನಿ ಹಿ ಯದ್ವಿಷಯಾಭಿಮುಖಂ
ಪ್ರಗಮಯ್ಯ ಮತಿರ್ವಿಷಯೇಷು ಚರೇತ್ ।
ತದು ಜಾಗರಿತಂ ಪ್ರವದಂತಿ ಬುಧಾಃ
ನ ತದಸ್ತಿ ಮಮೇತ್ಯವಗಚ್ಛ ದೃಶೇಃ ॥ ೧೧೦

ಬುದ್ಧಿಯು ಇಂದ್ರಿಯಗಳನ್ನು ಶಬ್ದಾದಿವಿಷಯಗಳ ಕಡೆಗೆ ತಿರುಗಿಸಿ, ತಾನು ಆ ವಿಷಯಗಳಲ್ಲಿ ಸಂಚರಿಸುತ್ತದೆ. (ಎಂದರೆ ವಿಷಯಗಳಿಂದಾಗುವ ಸುಖದುಃಖಗಳನ್ನು ಅನುಭವಿಸುತ್ತದೆ). ಈ ಸ್ಥಿತಿಯನ್ನು ಜಾಗ್ರದವಸ್ಥೆಯೆಂದು ವಿದ್ವಾಂಸರು ಹೇಳುತ್ತಾರೆ. ಈ ಜಾಗ್ರದವಸ್ಥೆಯು ದೃಕ್‌ಸ್ವರೂಪನಾದ ನನಗೆ ಇಲ್ಲವೆಂದು ತಿಳಿದುಕೊ.

ಆತ್ಮನು ದೃಕ್‌ಸ್ವರೂಪನಾಗಿ ಸರ್ವಸಾಕ್ಷಿಯಾಗಿದ್ದಾನೆ. ಆತನಿಗೆ ಇಂದ್ರಿಯಾದಿಗಳ ಸಂಬಂಧವಿಲ್ಲ. ಇಂದ್ರಿಯಾದಿಗಳ ವ್ಯವಹಾರಕ್ಕೂ ಅವನು ಸಾಕ್ಷಿ. ಆತನೇ ನಾನೆಂದು ತಿಳಿಯಬೇಕು.

**ಟಿಪ್ಪಣಿ** :– ನಮ್ಮ ಮುದ್ರಿತ ಪ್ರತಿಯಲ್ಲಿ ನಾಲ್ಕನೇಪಾದದ ಕಡೆಯ ಶಬ್ದವು **"ದೃಶೇ :"** ಎಂದಿದೆ. ಇದು ಚತುರ್ಥೀವಿಭಕ್ತಿಯಾಗುವುದರಿಂದ ಈ ಪದವು ಅನನ್ವಿತವಾಗುತ್ತದೆ – ಎಂದು **"ದೃಶೇಃ"** ಎಂದು ತಿದ್ದಿಕೊಳ್ಳಲಾಗಿದೆ.

**ಕರಣಾನಿ ಯದೋಪರತಾನಿ ತದಾ**
**ವಿಷಯಾನುಭವಾಹಿತವಾಸನಯಾ ।**
**ವಿಷಯೇಣ ವಿನಾ ವಿಷಯಪ್ರತಿಮಂ**
**ಸ್ಫುರಣಂ ಸ್ವಪನಂ ಪ್ರವದಂತಿ ಬುಧಾಃ ॥** ೧೧೧

ಒಂದು ಅವಸ್ಥೆಯಲ್ಲಿ ಇಂದ್ರಿಯಗಳು ವಿಷಯಗಳ ಕಡೆ ಹೋಗದೆ ಉಪರತವಾಗಿರುತ್ತವೆ. ಆ ಸಮಯದಲ್ಲಿ ಹಿಂದಿನ ವಿಷಯಾನುಭವದಿಂದಾದ ಸಂಸ್ಕಾರದ ವಶವಾಗಿ, ವಿಷಯಗಳಿಲ್ಲದಿದ್ದರೂ ವಿಷಯಗಳಿವೆಯೋ ಎಂಬಂತೆ ಮನಸ್ಸು ಸ್ಪಂದಿಸುತ್ತದೆ. ಈ ಅವಸ್ಥೆಗೆ ಸ್ವಪ್ನವೆಂದು ವಿದ್ವಾಂಸರು ಹೇಳುತ್ತಾರೆ.

**ಟಿಪ್ಪಣಿ** :– ಸಾಕ್ಷಿಯಾದ ಆತ್ಮನಿಗೆ ಸ್ವಪ್ನಾವಸ್ಥೆಯೂ ಇಲ್ಲವೆಂದು ತಿಳಿಯಬೇಕು. ಸ್ವಪ್ನದಲ್ಲಿ ವಿಷಯವಿಲ್ಲದೆಯೇ ವಾಸನಾಬಲದಿಂದ ಮನಸ್ಸು ವಿಷಯಾಕಾರವನ್ನು ತಳೆದಿರುತ್ತದೆ.

**ಕರಣಸ್ಯ ಧಿಯಃ ಸ್ಫುರಣೇನ ವಿನಾ**
**ವಿಷಯಾಕೃತಿಕೇನ ತು ಯಾ ಸ್ಥಿತತಾ ।**
**ಪ್ರವದಂತಿ ಸುಷುಪ್ತಿಮಮೂಂ ಹಿ ಬುಧಾ**
**ವಿನಿವೃತ್ತತೃಷಃ ಶ್ರುತಿತತ್ತ್ವವಿದಃ ॥** ೧೧೨

ಅಂತಃಕರಣವೆನಿಸಿದ ಮನಸ್ಸು ವಿಷಯಾಕಾರವಾಗಿ ಸ್ಪಂದಿಸದೆಯೂ ಇದ್ದಾಗ ಯಾವ ಅವಸ್ಥೆಯುಂಟೋ ಅದನ್ನು ಸುಷುಪ್ತಿ (ತನಿ ನಿದ್ರೆ) ಯೆಂದು ಆಶಾರಹಿತರೂ ಶ್ರುತಿರಹಸ್ಯವನ್ನು ಬಲ್ಲವರೂ ಆದ ವಿದ್ವಾಂಸರು ಕರೆಯುತ್ತಾರೆ.

ಸುಷುಪ್ತಿಯೆಂಬ ಈ ಅವಸ್ಥೆಯೂ ನಿತ್ಯಚೈತನ್ಯನಾದ ಆತ್ಮನಿಗಿಲ್ಲ. ಆತನು ಸುಷುಪ್ತಿಗೂ ಸಾಕ್ಷಿಯಾಗಿರುತ್ತಾನೆ.

**ಇತಿ ಜಾಗರಿತಂ ಸ್ವಪನಂ ಚ ಧಿಯಃ**
**ಕ್ರಮತೋಽಕ್ರಮತಶ್ಚ ಸುಷುಪ್ತಿರಪಿ ।**
**ನ ಕದಾಚಿದಪಿ ತ್ರಯಮಸ್ತಿ ಮಮೇ –**
**ತ್ಯವಗಚ್ಛ ಸದಾಸ್ಮಿ ತುರೀಯಮಿತಿ ॥** ೧೧೩

ಈ ಪ್ರಕಾರವಾಗಿ ಜಾಗ್ರತ್, ಸ್ವಪ್ನ, ಸುಷುಪ್ತಿ – ಎಂಬ ಅವಸ್ಥೆಗಳು ಬುದ್ಧಿಗೇ ಉಂಟಾಗುತ್ತವೆ. ಇವು ಕ್ರಮವಾಗಿ ಬರಬಹುದು ಅಥವಾ ಅಕ್ರಮವಾಗಿ – ಸುಷುಪ್ತಿಯಾದ ಮೇಲೆ ಸ್ವಪ್ನ–ಈ ರೀತಿ ಬರಬಹುದು. ಈ ಮೂರು ಅವಸ್ಥೆಗಳೂ ಬುದ್ಧಿಗೇ ಹೊರತು ಆತ್ಮನಾದ ನನಗೆ ಎಂದಿಗೂ ಇಲ್ಲವೆಂದೂ ಇವುಗಳಿಗೆ ಅತೀತನಾದ ತುರೀಯನು ನಾನೆಂದೂ ತಿಳಿದುಕೋ.

ಆತ್ಮನು ತುರೀಯನೆನ್ನುವುದೂ ಸಾಪೇಕ್ಷವಾದದ್ದು–

**ಯದು ಜಾಗರಿತಪ್ರಭೃತಿ ತ್ರಿತಯಂ**
**ಪರಿಕಲ್ಪಿತಮಾತ್ಮನಿ ಮೂಢಧಿಯಾ ।**
**ಅಭಿಧಾನಮಿದಂ ತದಪೇಕ್ಷ್ಯ ಭವೇತ್**
**ಪರಮಾತ್ಮಪದಸ್ಯ ತುರೀಯಮಿತಿ ॥** ೧೧೪

ಅವಿವೇಕಿಯಾದ ಮನುಷ್ಯನು ಆತ್ಮನಿಗೆ ಜಾಗ್ರದಾದಿ ಅವಸ್ಥಾತ್ರಯಗಳಿವೆ ಯೆಂದು ಕಲ್ಪಿಸಿಕೊಂಡಿದ್ದಾನೆ. ಅದನ್ನನುಸರಿಸಿ ಪರಮಾತ್ಮ ಎಂಬ ಪದದೊಡನೆ 'ತುರೀಯ' ಎಂಬ ವಿಶೇಷಣ ಪದವನ್ನಿಡುವುದು ಸಾಪೇಕ್ಷವಾಗಿರುತ್ತದೆ.

ಪರಮಾತ್ಮನು ತುರೀಯನೆಂದು ವ್ಯವಹಾರವಿದೆ. ಪರಮಾತ್ಮ ಒಬ್ಬನೇ. ಜಾಗ್ರದಾದಿ ಅವಸ್ಥೆಗಳು ಚಿತ್ತವೃತ್ತಿಗೇ ಹೊರತು ಆತ್ಮನಿಗಲ್ಲ. ಹಾಗಾದರೆ ತುರೀಯ ನೆಂಬ ವ್ಯವಹಾರ ಹೇಗೆ ? ಮೂರು ಅವಸ್ಥೆಗಳಿದ್ದರಲ್ಲವೆ ನಾಲ್ಕನೆಯ ಅವಸ್ಥೆ ಎನ್ನುವುದು ? ಇದಕ್ಕೆ ಉತ್ತರ –ಆತ್ಮನಿಗೆ ಮೂರುಅವಸ್ಥೆಗಳಿವೆಯೆಂಬ ಮೂಢಕಲ್ಪನೆ ಯನ್ನಿಟ್ಟುಕೊಂಡು ತುರೀಯನೆಂಬ ವ್ಯವಹಾರ ಬಂದಿದೆ.

**ಯದುಪೇಕ್ಷ್ಯ ಭವೇದಭಿಧಾನಮಿದಂ**
**ಪರಮಾತ್ಮ ಪದಸ್ಯ ತುರೀಯಮಿತಿ ।**
**ತದಸತ್ಯಮಸತ್ಯಗುಣಶ್ಚ ತತಃ**
**ಪರಿನಿರ್ಮಿತವಾರಣಚೇಷ್ಟಿತವತ್ ॥** ೧೧೫

ಯಾವ ಮೂರು ಅವಸ್ಥೆಗಳನ್ನಿಟ್ಟುಕೊಂಡು, ಪರಮಾತ್ಮಸ್ವರೂಪವು ತುರೀಯ ವಾದದ್ದು ಎಂಬ ವ್ಯವಹಾರ ಬಂದಿದೆಯೋ ಆ ಮೂರು ಅವಸ್ಥೆಗಳೂ ಆತ್ಮನಲ್ಲಿರುವುದು ಅಸತ್ಯವೆಂದು ತಿಳಿಯಬೇಕು. ಶಿಲಾನಿರ್ಮಿತವಾದ ಆನೆಯಲ್ಲಿ ಕ್ರಿಯೆಯು ಹೇಗೆ ಅಸತ್ಯವೋ ಹಾಗೆ ಇದು ಮಿಥ್ಯೆಯೇ ಸರಿ.

ಶಿಲ್ಪಿಯು ಕೌಶಲದಿಂದ ಕಲ್ಲಿನಲ್ಲಿಯೋ ಮರದಲ್ಲಿಯೋ ಆನೆಯ ರೂಪವನ್ನು ಕೆತ್ತಿರುತ್ತಾನೆ, ಅಥವಾ ಬಟ್ಟೆ, ಕಾಗದ, ಗೋಡೆಗಳ ಮೇಲೆ ಚಿತ್ರಕಾರನು ಆನೆಯ

ಚಿತ್ರವನ್ನು ಬರೆದಿರುತ್ತಾನೆ. "ಈ ಆನೆ ಸಿಟ್ಟಿನಿಂದ ನೋಡುತ್ತಿದೆ, ಸೊಂಡಿಲನ್ನು ಬೀಸುತ್ತಿದೆ, ಕಾಲಿನಿಂದ ತುಳಿಯುತ್ತಿದೆ" ಎಂದು ಪ್ರೇಕ್ಷಕರು ಹೇಳಿಕೊಳ್ಳುತ್ತಾರೆ. ಎಲ್ಲ ಕ್ರಿಯೆಯೂ ಅಸತ್ಯ, ಕಲ್ಪಿತ. ಹಾಗೆಯೇ "ಆತ್ಮನು ಎಚ್ಚೆತ್ತಿದ್ದಾನೆ, ಕನಸು ಕಾಣುತ್ತಾನೆ, ನಿದ್ರಿಸುತ್ತಾನೆ"-ಎಂಬ ವ್ಯವಹಾರ. ನಿತ್ಯಚೈತನ್ಯನಾದ ಆತ್ಮನಿಗೆ ಇಂತಹ ಯಾವ ಸ್ಥಿತಿಯೂ ಪ್ರಾಪ್ತವಾಗುವುದಿಲ್ಲ. ಈ ಸ್ಥಿತಿಗಳೆಲ್ಲವೂ ಅಂತಃಕರಣಕ್ಕೆ ಸಂಬಂಧಿಸಿದ್ದು.

**ಗಗನಪ್ರಮುಖಂ ಪೃಥಿವೀ ಚರಮಂ**
**ವಿಷಯೇಂದ್ರಿಯ ಬುದ್ಧಿಮನಃಸಹಿತಮ್ ।**
**ಜನಿಮಜ್ಜಗದೇತದಭೂತಮಿತಿ**
**ಶ್ರುತಯಃ ಪ್ರವದಂತ್ಯುಪಮಾನಶತೈಃ ॥** ೧೧೬

ಶಬ್ದಾದಿವಿಷಯಗಳು, ಇಂದ್ರಿಯಗಳು, ಮನೋಬುದ್ಧಿಸಹಿತವಾಗಿ ಆಕಾಶದಿಂದ ಹಿಡಿದು ಪೃಥ್ವಿಯವರೆಗೆ ಜನ್ಯವಾದ ಈ ಜಗತ್ತೆಲ್ಲವೂ ಅಸತ್ಯವೆಂದು ಶ್ರುತಿಗಳು ನೂರಾರು ದೃಷ್ಟಾಂತಗಳನ್ನು ಕೊಟ್ಟು ಘೋಷಿಸುತ್ತವೆ.

**"ಯತ್ ಕೃತಕಂ ತದನಿತ್ಯಮ್ = ಯಾವುದು ಜನ್ಯವೋ ಅದು ಅನಿತ್ಯ"** ವೆಂಬುದು ನ್ಯಾಯ ಸಿದ್ಧವಾಗಿದೆ. **"ಮೃತ್ತಿಕೇತ್ಯೇವ ಸತ್ಯಮ್"** ಇತ್ಯಾದಿ ವೇದ ವಚನಗಳು ಜನ್ಯವಾದ ವಿಕಾರಗಳೆಲ್ಲವೂ ಅನಿತ್ಯವೆಂದು ಹೇಳಿವೆ. ಆತ್ಮ ಒಂದೇ ಸತ್ಯವೆಂದು ಸಾರುತ್ತವೆ. ಇದರಿಂದ ಆತ್ಮೇತರವಾಗಿ ತೋರುವ ಜಗತ್ತು ಅಸತ್ಯವೆಂದು ಸಿದ್ಧವಾಗುತ್ತದೆ. ಯಾವುದು ಯಾವ ಕಾಲದಲ್ಲಿಯೂ ಬದಲಾವಣೆ ಹೊಂದುವುದಿಲ್ಲವೋ ಅದು ಸತ್ಯ-ಜಗತ್ತೆಲ್ಲವೂ ಬದಲಾವಣೆ ಹೊಂದತಕ್ಕದ್ದು. ಆದ್ದರಿಂದ ಸತ್ಯವಲ್ಲ. ಸತ್ಯ-ನಿತ್ಯ ಇವೆರಡೂ ಒಂದೇ.

**ಕಫ ಪಿತ್ತ ಸಮೀರಣ ಧಾತು ಧೃತಂ**
**ಕುಶರೀರಮಿದಂ ಸತತಂ ಹಿ ಯಥಾ ।**
**ಪ್ರಭವಪ್ರಭೃತಿಪ್ರಲಯಾಂತಮಿದಂ**
**ಜಗದಗ್ನಿರವೀಂದುಧೃತಂ ಹಿ ತಥಾ ॥** ೧೧೭

ಕುತ್ಸಿತವಾದ ಈ ಶರೀರವು ಕಫ, ಪಿತ್ತ, ವಾತಗಳೆಂಬ ಧಾತುಗಳಿಂದ ಸದಾ ಧರಿಸಲ್ಪಟ್ಟಿದೆ. ಹಾಗೆಯೇ ಈ ಜಗತ್ತು ಹುಟ್ಟಿನಿಂದ ಪ್ರಳಯದವರೆಗೆ ಅಗ್ನಿ, ಸೂರ್ಯ, ಚಂದ್ರರಿಂದ ಧರಿಸಲ್ಪಟ್ಟಿದೆ.

ಶ್ಲೇಷ್ಮ, ಪಿತ್ತ, ವಾತಗಳೆಂಬ ತ್ರಿಧಾತುಗಳು ಸಮತೆಯಲ್ಲಿದ್ದಾಗ ಈ ದೇಹವು ಆರೋಗ್ಯದಿಂದಿರುತ್ತದೆ. ವಿಷಮಿಸಿದಾಗ ಆರೋಗ್ಯವೂ ವಿಷಮಿಸುತ್ತದೆ. ಧಾತುಗಳು

ತೀವ್ರವಾಗಿ ವಿಷಮಿಸಿದಾಗ ಶರೀರವು ಅಳಿಯುತ್ತದೆ. ಅಂತೆಯೇ ಸೂರ್ಯಾದಿಜ್ಯೋತಿಗಳು ಭೂಮಿಯನ್ನು ಹಿಡಿದು ನಿಲ್ಲಿಸಿವೆ. ಅವುಗಳ ಕ್ರಿಯಾಶಕ್ತಿಯು ಪಲ್ಲಟವಾದಾಗ ಭೂಮಿಯಲ್ಲಿ ಭೂಕಂಪಾದಿಗಳು ಸಂಭವಿಸುತ್ತವೆ. ಅವುಗಳ ಕ್ರಿಯಾಶಕ್ತಿಯು ಉಲ್ಬಣಿಸಿದಾಗ ಜಗತ್ತಿಗೆ ಪ್ರಳಯವಾಗುತ್ತದೆ.

ಹೀಗೆ ಜಗತ್ತನ್ನು ಹಿಡಿದು ನಿಲ್ಲಿಸಿರುವ ಸೂರ್ಯಾದಿಗಳೇ ಅನಿತ್ಯಗಳಾದಾಗ ಜಗತ್ತು ಅನಿತ್ಯವೆಂದು ಹೇಳತಕ್ಕದ್ದೇನಿದೆ–

**ಜಗತಃ ಸ್ಥಿತಿಕಾರಣಮಿತ್ಥಮಿದಂ**
**ಪ್ರಥಿತಂ ರವಿವಹ್ನಿಶಶಿತ್ರಿತಯಮ್ ।**
**ಸ್ಮೃತಿವೇದಜನೇಷು ಭೃಶಂ ಪ್ರಥಿತಂ**
**ಶ್ರುತಿರೀರಿತವತ್ಯನೃತಂ ತದಿತಿ ॥** ೧೧೮

ಪ್ರಸಿದ್ಧಗಳಾದ ಸೂರ್ಯ, ಅಗ್ನಿ, ಚಂದ್ರ–ಇವು ಮೂರು ಜಗತ್ತಿನ ಸ್ಥಿತಿಗೆ ಕಾರಣವೆಂದು ವೇದದಲ್ಲಿಯೂ, ಸ್ಮೃತಿಗ್ರಂಥದಲ್ಲಿಯೂ, ಶಾಸ್ತ್ರಜ್ಞರಾದ ಜನರಲ್ಲಿಯೂ ಸುಪ್ರಸಿದ್ಧವಾಗಿದೆ. ಈ ತ್ರಯವೂ ಅಸತ್ಯ–ಅನಿತ್ಯವೆಂದು ಶ್ರುತಿಯು ಸಾರಿ ಹೇಳಿದೆ.

ಇಲ್ಲಿ ಈ ಶ್ಲೋಕಗಳನ್ನು ಗಮನಿಸಬೇಕು–

೧. ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥

–ಗೀತಾ ೧೫–೧೪

೨. ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥

–ಗೀತಾ ೧೫–೧೨

**ಯದು ರೋಹಿತ ಶುಕ್ಲಸುಕೃಷ್ಣಮಿದಂ**
**ಜ್ವಲನಾದಿಷು ರೂಪಮವೈತಿ ಜನಃ ।**
**ತದು ತೈಜಸಮಾಪ್ಯಮಥಾನ್ನಮಿತಿ**
**ಬ್ರುವತೀ ತ್ರಯಮೇವ ತು ಸತ್ಯಮಿತಿ ॥** ೧೧೯

ಅಗ್ನಿ ಮೊದಲಾದವುಗಳಲ್ಲಿ ಕೆಂಪು, ಬಿಳುಪು, ಕಪ್ಪು-ಎಂಬುದಾಗಿ ಯಾವುದನ್ನು ಜನರು ಕಾಣುತ್ತಿದ್ದಾರೋ ಅದು ತೇಜಸ್ಸಿನದು, ನೀರಿನದು, ಪೃಥ್ವಿಯದು-ಇತ್ಯಾದಿ ಯಾಗಿ ಹೇಳುವ ಶ್ರುತಿಯು ಆ ರೂಪತ್ರಯವು ಮಾತ್ರ ಸತ್ಯವೆಂದು ಸಾರುತ್ತದೆ.

**ವಿವರಣೆ** :-ಛಾಂದೋಗ್ಯದಲ್ಲಿ **"ಯದಗ್ನೇ ರೋಹಿತಂ ರೂಪಂ ತೇಜಸಸ್ತ ದ್ರೂಪಂ, ಯಚ್ಛುಕ್ಲಂ ತದಪಾಂ, ಯತ್ಕೃಷ್ಣಂ ತದನ್ನಸ್ಯ । ಅಪಾಗಾದಗ್ನೇರಗ್ನಿತ್ವಂ, ವಾಚಾರಂಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಮ್"** ಎಂದುಹೇಳಿದೆ (6-4-1). ತ್ರಿವೃತ್‌ಕರಣಕ್ಕೆ ಪೂರ್ವದಲ್ಲಿ ತೇಜಸ್, ಜಲ, ಪೃಥ್ವಿ-ಎಂಬ ಮೂರು ತತ್ತ್ವಗಳಿದ್ದವೆಂದೂ ಅವು ಸಂಮಿಶ್ರವಾಗಿ ಅಗ್ನ್ಯಾದಿರೂಪದಲ್ಲಿ ಕಾಣಿಸಿಕೊಳ್ಳುತ್ತವೆಯೆಂದೂ ಹೇಳಲಾಗಿದೆ. ಈ ರೂಪಗಳು ಹಿಂದಕ್ಕೆ ಸರಿಯಲಾಗಿ ಅಗ್ನಿಮೊದಲಾದದ್ದು ಉಳಿಯುವುದೇ ಇಲ್ಲ. ಮೂಲಭೂತವಾದ ರೂಪತತ್ತ್ವಗಳು ಮಾತ್ರ ಉಳಿಯುತ್ತವೆ. ಎಂದು ಶ್ರುತಿಯ ತಾತ್ಪರ್ಯ. ಈ ಪ್ರಕಾರವಾಗಿ ಎಲ್ಲ ತತ್ತ್ವಗಳನ್ನೂ ನಿರಾಕರಿಸಿ ಆತ್ಮವಸ್ತುವಿನ ಬಳಿಗೆ ನಮ್ಮನ್ನು ಒಯ್ದು ಶ್ರುತಿಯು ನಿಲ್ಲಿಸುತ್ತದೆ. ಇದರಿಂದ ಆತ್ಮಾತಿರಿಕ್ತವಾದ ಸೂರ್ಯಾದಿಗಳೆಲ್ಲ ಮಿಥ್ಯೆಯೆಂದು ಗೊತ್ತಾ ಗುತ್ತದೆ.

**ರುಚಕಪ್ರಮುಖಂ ಕನಕಾದಿಮಯಂ**
**ರುಚಕಾದ್ಯಭಿಧಾನನಿಮಿತ್ತಮಪಿ ।**
**ಅಸದಿತ್ಯವಗಮ್ಯತ ಏವ ಯತೋ**
**ವ್ಯಭಿಚಾರವತೀ ರುಚಕಾದಿಮತಿಃ ॥ ೧೨೦**

ರುಚಕವೇ (ಎದೆಯಲ್ಲಿ ಧರಿಸುವ ಒಂದು ಆಭರಣ, ಪದಕ) ಮೊದಲಾದದ್ದು ಸುವರ್ಣಾದಿಗಳಿಂದ ನಿರ್ಮಿತವಾಗಿರುತ್ತದೆ. ರುಚಕ ಇತ್ಯಾದಿ ಶಬ್ದವ್ಯವಹಾರಕ್ಕೆ ರುಚಕಾದಿಗಳು ಕಾರಣವೂ ಹೌದು. ಆದರೂ ರುಚಕಾದಿಗಳು ಅಸತ್ಯವೆಂದು ಗೊತ್ತಾಗುತ್ತದೆ. ಏಕೆಂದರೆ, ಆ ವಸ್ತುಗಳಲ್ಲಿರುವ ರುಚಕಾದಿ ಬುದ್ಧಿಯು ಬದಲಾವಣೆ ಯಾಗುತ್ತದೆ.

**ವಿವರಣೆ** :-ಚಿನ್ನದಿಂದ ರುಚಕಾದ್ಯಾಭರಣಗಳೂ ತಾಮ್ರದಿಂದ ಪಾತ್ರೆಗಳೂ ಉಕ್ಕಿನಿಂದ ಆಯುಧಗಳೂ ಆಗುತ್ತವೆ. ಈ ರುಚಕಾದಿಗಳು ಇದು ರುಚಕ, ಇದು ಹಂಡೆ, ಇದು ಕತ್ತಿ-ಎಂಬ ಶಬ್ದ ವ್ಯವಹಾರಕ್ಕೆ ಕಾರಣಗಳೂ ಆಗಿವೆ. ಇಷ್ಟಾದರೂ ಇವು ಅಸತ್ಯಗಳೆಂದು ತಿಳಿಯಬೇಕು. ಏಕೆಂದರೆ ಇವುಗಳ ಸ್ವರೂಪ ನಿತ್ಯವಲ್ಲ. ಇವುಗಳನ್ನು ಬೆಂಕಿಯಲ್ಲಿ ಕರಗಿಸಿದರೆ ರುಚಕ ಇತ್ಯಾದಿ ವ್ಯವಹಾರವೆಲ್ಲ ಹೋಗಿ ಬಿಡುತ್ತದೆ. ಆದರೆ ಚಿನ್ನ, ತಾಮ್ರ, ಉಕ್ಕು ಎಂಬ ಬುದ್ಧಿ ಮಾತ್ರ ಹೋಗುವುದಿಲ್ಲ.

ಆದ್ದರಿಂದ ರುಚಕವು ಮಿಥ್ಯೆ, ಚಿನ್ನವು ಸತ್ಯ–ಎಂದು ಪ್ರಕೃತದಲ್ಲಿ ಅಭಿಪ್ರಾಯ. ಇದರಿಂದ ಕಾರಣವು ಸತ್ಯವೆಂದು ನಿರ್ಣಯ.

ನ ಕದಾಚಿದಪಿ ವ್ಯಭಿಚಾರವತೀ
ಕನಕಾದಿಮತಿಃ ಪುರುಷಸ್ಯ ಯತಃ ।
ತತ ಏವ ಹಿ ಸತ್ಯತಯಾಭಿಮತಂ
ಕನಕಾದಿವಿಪರ್ಯಯ ಏಷು ನ ಹಿ ॥ ೧೨೧

ಆದರೆ ಆ ವಸ್ತುಗಳಲ್ಲಿ "ಇದು ಚಿನ್ನ, ಇದು ತಾಮ್ರ, ಇದು ಉಕ್ಕು" ಎಂಬ ಬುದ್ಧಿಗೆ ಮಾತ್ರ ಅಪೋಹವಿರುವುದಿಲ್ಲ. ಆದ್ದರಿಂದ ಅದು ಚಿನ್ನ, ತಾಮ್ರ, ಉಕ್ಕು ಎಂಬುದು ಸತ್ಯವೆಂದು ಒಪ್ಪಲಾಗುತ್ತದೆ. ಅದಕ್ಕೆ ವಿಪರೀತವಾಗಿ ಅದು ಚಿನ್ನವಲ್ಲ, ತಾಮ್ರವಲ್ಲ, ಉಕ್ಕಲ್ಲ–ಎಂದು ಹೇಳಲಾಗುವುದಿಲ್ಲ.

ಚಿನ್ನವು ರುಚಕವಾದಾಗಲೂ ಇದು ಚಿನ್ನವೆಂಬ ಬುದ್ಧಿ ಇರುತ್ತದೆ. ಅದನ್ನು ಕರಗಿಸಿದಾಗಲೂ ಅಥವಾ ಬಳೆಯಾಗಿ ಮಾಡಿದಾಗಲೂ ಚಿನ್ನವೆಂಬ ಬುದ್ಧಿಗೆ ಅಪೋಹವಿಲ್ಲ. ಈ ಮಾತನ್ನು ರುಚಕ, ಬಳೆ ಮೊದಲಾದವುಗಳಿಗೆ ಹೇಳಲಾಗುವುದಿಲ್ಲ. ರುಚಕವನ್ನು ಕರಗಿಸಿದಾಗ ಅಥವಾ ಬಳೆಯಾಗಿ ಮಾಡಿದಾಗ "ಇದು ರುಚಕ" ಎಂದು ಯಾರೂ ಹೇಳುವುದಿಲ್ಲ. ಚಿನ್ನವು ಕಾರಣ. ರುಚಕಾದಿಗಳು ಕಾರ್ಯ. ಆದ್ದರಿಂದ ಕಾರಣವು ಸತ್ಯವೇ ಹೊರತು ಕಾರ್ಯವು ಸತ್ಯವಲ್ಲ,.

ರುಚಕಾದಿಸಮಂ ಜ್ವಲನಾದಿ ಭವೇತ್
ಅನೃತತ್ವಗುಣೇನ ತು, ಸತ್ಯತಯಾ ।
ಅರುಣಪ್ರಮುಖಂ ಜ್ವಲನಪ್ರಭೃತಿ–
ಪ್ರಕೃತಿತ್ರಿತಯಂ ಕನಕಾದಿಸಮಮ್ ॥ ೧೨೨

ಹೀಗೆಯೇ (ಹಿಂದೆ ಹೇಳಿದ) ಅಗ್ನಿ ಮೊದಲಾದದ್ದು ಅಸತ್ತ್ವಗುಣದಿಂದ ರುಚಕಾದಿಗಳಿಗೆ ಸಮಾನ. ಅಗ್ನಿ, ಜಲ, ಪೃಥ್ವಿಗಳಲ್ಲಿರುವ ಕೆಂಪು ಗುಣ–ಮುಂತಾದ ಮೂರು ಪ್ರಕೃತಿಗಳು ಕನಕಾದಿಗಳಿಗೆ ಸತ್ಯತ್ವಗುಣದಿಂದ ಸಮಾನವಾಗಿವೆ.

**ವಿವರಣೆ** :–ಪ್ರಕೃತಿಯೆಂದರೆ ಉಪಾದಾನ ಕಾರಣ. ರುಚಕಾದಿಗಳಿಗೆ ಕನಕಾದಿಗಳು ಉಪಾದಾನಕಾರಣ. ಕೆಂಪು–ಮೊದಲಾದವು ಅಗ್ನಿಯೇ ಮೊದಲಾದ್ದಕ್ಕೆ ಉಪಾದಾನ ಕಾರಣ. ಕಾರಣವು ಸತ್ಯ, ಕಾರ್ಯವು ಅಸತ್ಯ. ಆದ್ದರಿಂದ ಅಗ್ನಿಯೇ ಮೊದಲಾದವು ರುಚಕಾದಿಗಳಂತೆ ಅಸತ್ಯ. ಈ ಶ್ಲೋಕದಲ್ಲಿ "ಜ್ವಲನಪ್ರಭೃತಿಪ್ರಕೃತಿ ತ್ರಿತಯಂ" ಎಂಬುದು ಸಮಸ್ತಪದ. 'ಜ್ವಲನ ಪ್ರಭೃತಿಗಳ ಯಾವ ಪ್ರಕೃತಿತ್ರಯ

ಉಂಟೋ ಅದು'' ಎಂದು ಅರ್ಥ ಮಾಡಿಕೊಳ್ಳಬೇಕು. ಎರಡನೆಯ ಸಾಲಿನಲ್ಲಿ 'ತು' ಶಬ್ದದ ಹಿಂದಿರುವ 'ಅನೃತತತ್ತ್ವಗುಣೇನ' ಎಂಬುದಕ್ಕೆ ಪೂರ್ವಾನ್ವಯವನ್ನೇ ಹೇಳಬೇಕಾಗಿದೆ. 'ಸತ್ಯತಯಾ' ಎಂಬುದಕ್ಕೆ ಉತ್ತರಾನ್ವಯ.

**ಅನಯೋಪಮಯಾನೃತತಾಮವದತ್**
**ಶ್ರುತಿರಗ್ನಿದಿವಾಕರಚಂದ್ರಮಸಾಮ್ ।**
**ಅಮೃಷಾತ್ವಮಪಿ ಶ್ರುತಿರುಕ್ತವತೀ**
**ತ್ರಿತಯಸ್ಯ ತು ರಕ್ತಪುರಃಸರಿಣಃ ॥ ೧೨೩**

ಈ ದೃಷ್ಟಾಂತದಿಂದ ಅಗ್ನಿ, ಸೂರ್ಯ, ಚಂದ್ರರು ಮಿಥ್ಯೆಯೆಂದೂ ಕೆಂಪುಗುಣ ಮೊದಲಾದ ಮೂರು ತತ್ತ್ವಗಳು ಸತ್ಯವೆಂದೂ ಶ್ರುತಿಯು ಪ್ರತಿಪಾದಿಸಿದೆ.

**ಟಿಪ್ಪಣಿ** :- ಕಾರಣವು ಸತ್ಯ, ಕಾರ್ಯವು ಅಸತ್ಯ-ಎಂಬ ಪ್ರಮೇಯಕ್ಕೆ **"ಯದಗ್ನೇ ರೋಹಿತಂ ರೂಪಂ....."** ಇತ್ಯಾದಿವಾಕ್ಯವು ದೃಷ್ಟಾಂತವಾಕ್ಯವೆಂದು ತಿಳಿಯಬೇಕು.

**ಅನೃತತ್ವಮಿದಂ ಜ್ವಲನಪ್ರಭೃತೇಃ**
**ಯದವಾದಿ ಭವೇತ್ತದುಹಾರಣಮ್ ।**
**ವಿತಥಾ ವಿಕೃತಿಃ ಸತತಂ ಸಕಲಾ**
**ನ ತಥಾ ಪ್ರಕೃತಿಃ ಶ್ರುತಿನಿಶ್ಚಯತಃ ॥ ೧೨೪**

ಎಲ್ಲ ವಿಕಾರವೂ ಮಿಥ್ಯೆ-ಸುಳ್ಳು, ಪ್ರಕೃತಿಯು ಹಾಗಲ್ಲದೆ ಸತ್ಯವಾಗಿದೆ ಎಂಬುದು ಶ್ರುತಿಯು ತಿಳಿಸಿಕೊಟ್ಟ ನಿಶ್ಚಯ. ಅಗ್ನಿ ಮೊದಲಾದದ್ದು ಅಸತ್ಯ ಎಂದು ಹೇಳಿದ್ದು ಈ ನಿಶ್ಚಯಕ್ಕೆ ಉದಾಹರಣೆ.

ಟಿಪ್ಪಣಿ-ಉಪಮಾನ, ದೃಷ್ಟಾಂತ, ಉದಾಹರಣೆ-ಇವು ಪ್ರಕೃತದಲ್ಲಿ ಸಮಾನಾರ್ಥಕಗಳೆಂದು ತಿಳಿಯಬೇಕು.

**ಪ್ರದಿದರ್ಶಯಿಷುರ್ವಸನಸ್ಯ ಯಥಾ**
**ವಿತಥಾತ್ವಮಪಾಸ್ಯತಿ ತಂತುಗುಣಮ್ ।**
**ಅಪಕೃಷ್ಯ ತು ತಂತುಸಮಂ ತ್ರಿತಯಂ**
**ಜ್ವಲನಪ್ರಮುಖಸ್ಯ ತಥೋಕ್ತವತೀ ॥ ೧೨೫**

ಬಟ್ಟೆಯು **ಅಸತ್ಯ-ಅನಿತ್ಯ** ಎಂದು ಪ್ರದರ್ಶನಮಾಡಿ ತೋರಿಸಬೇಕೆಂದಿರುವವನು ಬಟ್ಟೆಯಿಂದ ನೂಲಿನ ಎಳೆಯನ್ನು ಒಂದೊಂದಾಗಿ ಕಿತ್ತುಹಾಕಿಬಿಡುತ್ತಾನೆ.

ಹಾಗೆಯೇ ಅಗ್ನಿ ಮೊದಲಾದವು ಅಸತ್ಯ-ಎಂದು ತೋರಿಸುವುದಕ್ಕಾಗಿ, ಶ್ರುತಿಯು ನೂಲಿನ ಎಳೆಗೆ ಸಮವಾದ ಕೆಂಪು ಗುಣ ಮುಂತಾದ ಮೂಲತತ್ತ್ವವನ್ನು ಬೇರ್ಪಡಿಸಿ "ಅಪಾಗಾದಗ್ನೇರಗ್ನಿತ್ವಂ" ಎಂದು ಹೇಳಿದೆ.

**ಅವನಿಪ್ರಮುಖಂ ವಿಯದಂತಮಿದಂ**
**ವಿಕೃತಿಸ್ತು ಪರಸ್ಯ ಭವತ್ಯಪರಮ್ ।**
**ಅನೃತಂ ತ್ವಪರಂ ವಿಕೃತಿಸ್ತು ಯತೋಽ**
**ವಿತಥಂ ತು ಪರಂ ಪ್ರಕೃತಿಸ್ತು ಯತಃ ॥** ೧೨೬

ಪೃಥಿಯಿಂದ ಹಿಡಿದು ಆಕಾಶಪರ್ಯಂತವಾದ ಪಂಚಭೂತಗಳು ವಿಕಾರಗಳು ಎಂದರೆ ಕಾರ್ಯಗಳು. ಇವು ಪರಮಾತ್ಮನ ಅಪರಮೂರ್ತಿ ಎನ್ನಿಸಿವೆ. ಇದು ವಿಕೃತಿಯಾದ್ದರಿಂದ ಅಸತ್ಯ-ಮಿಥ್ಯಾ. ಆತ್ಮನ ಪರಮೂರ್ತಿಯಾದರೋ ಸತ್ಯವಾದದ್ದು. ಏಕೆಂದರೆ ಅದು ಪ್ರಕೃತಿ (ಕಾರಣ).

**ಅತ ಏತದಸೇಧಿ ಸದುಕ್ತಿ ಪರಂ**
**ನ ಮೃಷೇತಿ ಮೃಷಾ ತು ತತೋಽನ್ಯದಿತಿ ।**
**ಇತಿ ಸಿದ್ಧಮತೋ ಯದವಾದಿ ಮಯಾ**
**ಜನಿಮಜ್ಜಗದೇತದಭೂತಮಿತಿ ॥** ೧೨೭

ಪರವಾದ ಬ್ರಹ್ಮವಸ್ತು ಅಸತ್ಯವಲ್ಲ, ಅದಕ್ಕೆ ಭಿನ್ನವಾಗಿ ಕಾಣತಕ್ಕದ್ದು ಮಾತ್ರ ಅಸತ್ಯ-ಎಂಬ ವಿಷಯವು ಸರಿಯಾದದ್ದೆಂದು ಸಿದ್ಧವಾಯಿತು. ಆದಕಾರಣ "ಜನ್ಯವಾದ ಈ ಜಗತ್ತು ಅಸತ್ಯ" ಎಂದು ನಾನು ಏನು ಹೇಳಿದ್ದೆನೋ ಅದು ಸರಿಯೆಂದು ನಿಶ್ಚಿತವಾಯಿತು.

**ಟಿಪ್ಪಣಿ :-ಅಸೇಧಿ = ಷಿಧು ಸಂರಾದ್ಧೌ, ಸಿಧ್ಯತಿ.** ಈ ಧಾತು ಅಕರ್ಮಕವೂ ಪರಸ್ಮೈಪದಿಯೂ ಆದ್ದರಿಂದ "**ಅಸೇಧಿ**" ಎಂಬ ರೂಪವನ್ನು ಸಾಧಿಸಲಾಗುವುದಿಲ್ಲ. ಭ್ವಾದಿಯಲ್ಲಿರುವ, ಷಿಧ, ಷಿಧೂ (ಸೇಧತಿ) ಧಾತುಗಳ ಮೇಲೆ ಕರ್ಮಣಿಲುಙ್ ಬಂದರೆ ಈ ರೂಪವು ಸಿದ್ಧಿಸಿದರೂ ಅರ್ಥವು ಸರಿಯಾಗಿ ಹೊಂದುವುದಿಲ್ಲ. "**ಅಸಾಧಿ**" ಎಂಬ ಪಾಠವಿದ್ದರೆ ಉತ್ತಮ. ಸಾಧ ಸಂಸಿದ್ಧೌ । ಸ್ವಾದಿಃ । ಕರ್ಮಣಿ ಲುಙ್. ಮುಂದಿನ ಶ್ಲೋಕದಲ್ಲಿರುವ 'ಅಸೇಧಿ' ಶಬ್ದಕ್ಕೂ ಈ ಹೇಳಿಕೆ ಅನ್ವಯಿಸುತ್ತದೆ. **ಸದುಕ್ತಿ**= ಇದು ಬಹುವ್ರೀಹಿ. **ಏತತ್** ಎಂಬುದಕ್ಕೆ ವಿಶೇಷಣ.

ಮನಸೋಽಪ್ಯನೃತತ್ವಮಸೇಧ್ಯಮುತಃ
ಪ್ರತಿಪಾದಿತ ಹೇತುತ ಏವ ಭವೇತ್ ।
ಚರಿತಂ ಚ ತದೀಯಮಸತ್ಯಮತ:
ಪರಿನಿರ್ಮಿತವಾರಣಚೇಷ್ಟಿತವತ್ ॥ ೧೨೮

ಇದುವರೆಗೆ ಪ್ರತಿಪಾದಿಸಿದ ಹೇತುವಿನಿಂದಲೇ ಮನಸ್ಸು ಮಿಥ್ಯೆಯೆಂದು ಸಿದ್ಧವಾಯಿತು. ಆದ್ದರಿಂದಲೇ ಅದರ ವ್ಯಾಪಾರವೂ ಶಿಲಾದಿನಿರ್ಮಿತಗಜದ ಕ್ರಿಯೆಯಂತೆ ಮಿಥ್ಯೆಯೆಂದು ಸಿದ್ಧವಾಯಿತು.

ಜನ್ಯವಾದದ್ದು-ಕೃತಕವಾದದ್ದು ಅಸತ್ಯವೆಂಬುದು ನಿಯಮ. ಮನಸ್ಸು ಜನ್ಯವಾದ್ದರಿಂದ ಅದು ಅಸತ್ಯ. ಅದು ಅಸತ್ಯವಾದ್ದರಿಂದ ಮನೋವ್ಯಾಪಾರವೂ ಅಸತ್ಯ.

ಮನಸ್ಸು ಮಿಥ್ಯೆ ಎನ್ನುವುದು ಹೇಗೆ ? ಎಂಬುದಾಗಿ ಶಿಷ್ಯನ ಶಂಕೆ-

ನನು ನಾಭ್ಯವದಚ್ಛ್ರುತಿರುದ್ಭವನಂ
ಮನಸಸ್ತು ಸತೋ ನ ಚ ಖಪ್ರಮುಖಾತ್ ।
ಕಥಮಸ್ಯ ಭವೇದನೃತತ್ವ ಗತಿ-
ರ್ಮನಸೋ ಭಗವನ್ ವದ ನಿಶ್ಚಯತ: ॥ ೧೨೯

ಹೇ ಭಗವನ್, ಮನಸ್ಸು ಬ್ರಹ್ಮನಿಂದಾಗಲಿ ಆಕಾಶಾದಿಗಳಿಂದಾಗಲಿ ಜನಿಸಿದೆಯೆಂದು ಶ್ರುತಿಯು ಹೇಳಿಲ್ಲ. ಹೀಗಿರುವಾಗ ಮನಸ್ಸು ಅಸತ್ಯವೆಂದು ತಿಳಿದುಕೊಳ್ಳುವುದು ಹೇಗೆ ? ಇದನ್ನು ನಿಶ್ಚಯಿಸಿ ಹೇಳೋಣವಾಗಬೇಕು.

"ಆತ್ಮನ ಆಕಾಶ: ಸಂಭೂತ:। ಆಕಾಶದ್ವಾಯುಃ" ಇತ್ಯಾದಿ ಶ್ರುತಿ ವಾಕ್ಯವನ್ನು ಮಾತ್ರ ಕೇಳಿರುವ ಶಿಷ್ಯನ ಶಂಕೆಯಿದು. 'ಜನ್ಯವಾದದ್ದು ಅನಿತ್ಯ-ಮಿಥ್ಯೆ' ಎಂದು ಹೇಳಿದ್ದೀರಿ. ಮನಸ್ಸು ಜನ್ಯವಲ್ಲ-ಎಂದು ಆತನ ಅಭಿಪ್ರಾಯ. ಆದರೆ ಛಾಂದೋಗ್ಯ, ಮುಂಡಕಗಳಲ್ಲಿ ಮನಸ್ಸು ಜನ್ಯವೆಂದು ಸ್ಪಷ್ಟವಾಗಿ ಹೇಳಿದೆ. ಇದನ್ನು ಮುಂದಿನ ಶ್ಲೋಕಗಳಲ್ಲಿ ತಿಳಿಸಿದೆ.

ನನು ಸಪ್ತಮ ಆತ್ಮನ ಉದ್ಭವನಂ
ಮನಸೋಽಭಿದಧಾವಸುನಾಪಿ ಸಹ।
ಕಥಮಸ್ಯ ಭವೇದಮೃಷಾತ್ವಗತಿ -
ರ್ಮನಸೋ ವಿಕೃತಿತ್ವಗುಣಸ್ಯ ವದ ॥ ೧೩೦

ಛಾಂದೋಗ್ಯದ ಸಪ್ತಮಾಧ್ಯಾಯದಲ್ಲಿ ಪ್ರಾಣಾದಿಗಳೊಡನೆ ಮನಸ್ಸು ಆತ್ಮನಿಂದ ಉತ್ಪನ್ನವಾಗಿದೆಯೆಂದು ಶ್ರುತಿಯು ಹೇಳಿದೆಯಲ್ಲವೆ ?. ಜನ್ಯವಾದ್ದರಿಂದ ಮನಸ್ಸು ವಿಕಾರಗುಣವುಳ್ಳದ್ದು. ಇದು ಮಿಥ್ಯೆಯಲ್ಲವೆಂಬ ಜ್ಞಾನ ಹೇಗೆ ಉಂಟಾದೀತು? ಹೇಳು. (ಮನಸ್ಸು ಮಿಥ್ಯೆ-ಅನಿತ್ಯವೇ ಸರಿ).

ಟಿಪ್ಪಣಿ :-" **ಆತ್ಮತಃ ಪ್ರಾಣ ಆತ್ಮತ ಆಶಾ....ಆತ್ಮತೋಮನಃ**" (ಛಾಂ. ೭-೨೬-೧)-ಇತ್ಯಾದಿ ಶ್ರುತಿಯು ಮನಸ್ಸು ಆತ್ಮನಿಂದ ಜನ್ಯವೆಂದು ತಿಳಿಸಿದೆ.

**ಅಸುನಾ ಕರಣೈರ್ಗಗನಪ್ರಮುಖೈಃ**
**ಸಹ ಮುಂಡಕ ಉದ್ಭವನಂ ಮನಸಃ ।**
**ಪುರುಷಾತ್ ಪರಮಾತ್ಮನ ಉಕ್ತಮತೋ**
**ವಿತಥಂ ಮನ ಇತ್ಯವಧಾರಯ ಭೋಃ ॥** ೧೩೧

ಪ್ರಾಣ, ಸರ್ವೇಂದ್ರಿಯಗಳು, ಆಕಾಶಾದಿ ಪಂಚಭೂತಗಳು – ಇವುಗಳೊಡನೆ ಮನಸ್ಸು ಪರಮಾತ್ಮನಿಂದ ಉತ್ಪನ್ನವಾಗಿದೆಯೆಂದು ಮುಂಡಕೋಪನಿಷತ್ತನಲ್ಲಿ ಹೇಳಿದೆ. ಆದಕಾರಣ ಮನಸ್ಸು ಮಿಥ್ಯೆಯೆಂದು ತಿಳಿದುಕೊ.

ಟಿಪ್ಪಣಿ :- **ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ । ಖಂ ವಾಯುರ್ಜ್ಯೋತಿರಾಪಶ್ಚ ಪೃಥಿವೀ ವಿಶ್ವಸ್ಯ ಧಾರಿಣೀ ॥**
(ಮುಂಡಕ-೧-೨-೩)

**ಮನಸೋಽನ್ನಮಯತ್ವಮವಾದಿ ಯತಃ**
**ತತ ಏವ ಹಿ ಭೂತಮಯತ್ವಗತಿಃ ।**
**ಕುಶರೀರವದೇವ ತತೋಽಪಿ ಭೃಶಂ**
**ವಿತಥಂ ಮನ ಇತ್ಯವಧಾರಯ ಭೋಃ ॥** ೧೩೨

ಅಲ್ಲದೆ ಮನಸ್ಸು ಅನ್ನಮಯವೆಂದು ಶ್ರುತಿಯಲ್ಲಿ ಉಕ್ತವಾಗಿದೆ. ಈ ಕುತ್ಸಿತಶರೀರದಂತೆ ಮನಸ್ಸು ಸಹ ಭೌತಿಕವೆಂದು ಅದರಿಂದಲೇ ಗೊತ್ತಾಗುತ್ತದೆ. ಆದ್ದರಿಂದಲೂ ಸಹ ಮನಸ್ಸು ನಿಶ್ಚಯವಾಗಿ ಅಸತ್ಯವೆಂದು ತಿಳಿದುಕೊ.

ಟಿಪ್ಪಣಿ :-' **ಅನ್ನಮಯಂ ಹಿ ಸೋಮ್ಯಮನಃ**' (ಛಾಂ.೬-೫-೪).
'**ಅನ್ನಮಶಿತಂ ತ್ರೇಧಾ ವಿಧೀಯತೇ, ತಸ್ಯ ಯಃ ಸ್ಥವಿಷ್ಠೋ ಧಾತುಸ್ತತ್ಪುರೀಷಂ ಭವತಿ, ಯೋ ಮಧ್ಯಮಸ್ತನ್ಮಾಂಸಂ, ಯೋಽಣಿಷ್ಠಸ್ತನ್ಮನಃ**'
(ಛಾಂ. ೬-೫-೧).

ಇದರಿಂದ ಮನಸ್ಸು ಅನ್ನದ ಕಾರ್ಯವೆಂದೂ, ಶರೀರದಂತೆ ಮನಸ್ಸೂ ಭೌತಿಕವೆಂದೂ ಗೊತ್ತಾಗುತ್ತದೆ. ಅನ್ನವೆಂದರೆ ಆಹಾರ. ಆಹಾರವು ಪಾಂಚ ಭೌತಿಕವೆಂಬುದು ಸ್ಪಷ್ಟವಾಗಿದೆ. ಜಗತ್ತು ಮಿಥ್ಯೆಯೆಂಬುದನ್ನು ಅನುಮಾನದಿಂದಲೂ ಸಾಧಿಸಬಹುದು.

ಕುರು ಪಕ್ಷಮಿಮಂ ಗಗನಪ್ರಮುಖಂ
ಜನಿಮತ್ ಸಕಲಂ ನ ಹಿ ಸತ್ಯಮಿತಿ ।
ಪ್ರಥಮಂ ಚರಮಂ ಚ ನ ಚಾಸ್ತಿ ಯತೋ
ರುಚಕಾದಿವದಿತ್ಯುಪಮಾಂ ಚ ವದ ॥ ೧೩೩

ಆಕಾಶವೇ ಮೊದಲಾದ ಜನ್ಯವಾದ ಸಕಲ ಜಗತ್ತನ್ನು ಪಕ್ಷವನ್ನಾಗಿಮಾಡು. ಅದು ಸತ್ಯವಲ್ಲವೆಂಬುದು ಸಾಧ್ಯವಾಗಿರಲಿ. ಆದಿಯಲ್ಲಿಯೂ ಅಂತ್ಯದಲ್ಲಿಯೂ ಇಲ್ಲವಾದ್ದರಿಂದ ಸತ್ಯವಲ್ಲವೆಂದು ಹೇತುವನ್ನು ತೋರಿಸು. ರುಚಕಾದಿಗಳಂತೆ ಎಂದು ದೃಷ್ಟಾಂತವನ್ನು ಹೇಳು.

ಹೇಗೆಂದರೆ–

೧. ಜನ್ಯವಾದ ಆಕಾಶಾದಿವಸ್ತು ಅಸತ್ಯ.

೨. ಆದಿಯಲ್ಲಿಯೂ ಅಂತ್ಯದಲ್ಲಿಯೂ ಇಲ್ಲವಾದ್ದರಿಂದ.

೩. ಯಾವುದು ಆದಿಯಲ್ಲಿಯೂ ಅಂತ್ಯದಲ್ಲಿಯೂ ಇಲ್ಲವೋ ಅದು ಅಸತ್ಯ, ರುಚಕಾದಿಗಳಂತೆ.

೪. ಅವುಗಳಂತೆಯೇ ಈ ಆಕಾಶಾದಿವಸ್ತು ಆದಿಯಲ್ಲಿಯೂ ಅಂತ್ಯದಲ್ಲಿಯೂ ಇಲ್ಲ.

೫. ಆದ್ದರಿಂದ ರುಚಕಾದಿಗಳಂತೆ ಆಕಾಶಾದಿಯೂ ಅಸತ್ಯ.

ಈ ಪಂಚಾವಯವಗಳಿಂದ ಕೂಡಿದ ಅನುಮಾನ ಪ್ರಕಾರದಿಂದ ಜಗತ್ತು ಅಸತ್ಯವೆಂದು ಸಿದ್ಧವಾಗುತ್ತದೆ. ರುಚಕಾದಿಗಳು ಅಸತ್ಯವೆಂಬುದನ್ನು ಹಿಂದೆ ತೋರಿಸಿ ಕೊಟ್ಟಿದೆ. 'ಆದಾವಂತೇ ಚ ಯನ್ನಾಸ್ತಿ ವರ್ತಮಾನೇಽಪಿ ತತ್ತಥಾ' (ಮಾಂಡೂಕ್ಯ ೨–೬)ಎಂಬ ನ್ಯಾಯದಂತೆ ಆದ್ಯಂತಗಳಲ್ಲಿ ಯಾವುದಕ್ಕೆ ಅಭಾವವಿರುತ್ತದೆಯೋ ಅದಕ್ಕೆ ವರ್ತಮಾನದಲ್ಲಿಯೂ ಅಭಾವವೇ ಎಂದು ತಿಳಿಯಬೇಕು.

ಕನಕೇ ರುಚಕಾದಿ ನ ಪೂರ್ವಮಭೂತ್
ಚರಮಂ ಚ ನ ವಿದ್ಯತ ಇತ್ಯನೃತಮ್ ।
ಅಧುನಾಪಿ ತಥೈವ ಸಮಸ್ತಮಿದಂ
ಜನಿಮದ್ವಿಯದಾದಿ ಭವೇದನೃತಮ್ ॥ ೧೩೪

ಚಿನ್ನದಲ್ಲಿ ರಚಕಾದ್ಯಾಭರಣವು ಮೊದಲು (ಒಡವೆ ಮಾಡುವುದಕ್ಕೆ ಪೂರ್ವದಲ್ಲಿ)ಇರಲಲ್ಲ. ಕಡೆಯಲ್ಲಿಯೂ (ಒಡವೆಯನ್ನು ಕರಗಿಸಿದ ಮೇಲೆಯೂ) ಇರುವುದಿಲ್ಲ. ಆದ್ದರಿಂದ ರುಚಕಾದಿಯು ಅಸತ್ಯ-ಮಿಥ್ಯೆ ಎಂದು ತಿಳಿಯಬೇಕು. ಹಾಗೆಯೇ ಜನ್ಯವಾದ ಆಕಾಶಾದಿಗಳು ಆದ್ಯಂತದಲ್ಲಿ ಇಲ್ಲವಾದ್ದರಿಂದ ಈಗಲೂ ಇಲ್ಲ. ಕಾಣುತ್ತಿರುವುದು ಮಿಥ್ಯೆ ಎಂದರಿಯಬೇಕು.

ಕನಕಾದಿಷು ಯದ್ಯುಪಜಾತಮಭೂತ್
ರುಚಕಪ್ರಮುಖಂ ಪೃಥಗೇವ ತತಃ ।
ಅಧಿಕಂ ಪರಿಮಾಣಮಮೀಷು ಕುತೋ
ನ ಭವೇದಿತಿ ವಾಚ್ಯಮವಶ್ಯಮಿದಮ್ ॥ ೧೩೫

ಚಿನ್ನವೇ ಮೊದಲಾದ ಮೂಲದ್ರವ್ಯದಲ್ಲಿ ರುಚಕವೇ ಮೊದಲಾದದ್ದು ಚಿನ್ನಕ್ಕಿಂತ ಭಿನ್ನವಾಗಿ ಉತ್ಪನ್ನವಾಯಿತು-ಎಂದು ಹೇಳುವುದಾದರೆ, ರುಚಕಾದಿಗಳ ಪರಿಮಾಣವು ಏಕೆ ಅಧಿಕವಾಗಲಿಲ್ಲ?-ಎಂಬುವ ಪ್ರಶ್ನೆಗೆ ಅವಶ್ಯವಾಗಿ ಉತ್ತರ ಹೇಳಬೇಕಾಗಿಬರುತ್ತದೆ.

**ವಿವರಣೆ** :- ವೈಶೇಷಿಕರು ಅಸತ್‌ಕಾರ್ಯವಾದಿಗಳು. ಮೊದಲು ಇಲ್ಲದ ಕಾರ್ಯವು ಕಾರಣಕ್ಕಿಂತ ಭಿನ್ನವಾಗಿ ಹೊಸದಾಗಿ ಹುಟ್ಟುತ್ತದೆ ಎಂದು ಹೇಳುತ್ತಾರೆ. ಚಿನ್ನವೇ ಪದಕವಾಗಿ ತೋರುವುದಿಲ್ಲ. ಪದಕವು ಹೊಸದಾಗಿ ಹುಟ್ಟಿದೆ ಎಂದು ಅವರ ಅಭಿಪ್ರಾಯ. ಜಗತ್ತು ಹೊಸದಾಗಿ ಹುಟ್ಟಿದೆ. ನಾಶವಾಗುವವರೆಗೆ ಅದು ಸತ್ಯವೇ -ಎಂದು ಅವರ ಹೇಳಿಕೆ. ಇದರ ಮೇಲೆ ವೇದಾಂತಿಯ ಆಕ್ಷೇಪವೇನೆಂದರೆ - ಪದಕವು ಹೊಸದಾಗಿ ಹುಟ್ಟುವುದಾದರೆ ಮೊದಲಿದ್ದ ಚಿನ್ನದ ತೂಕ ಏಕಿರುತ್ತದೆ ? ಆದ್ದರಿಂದ ಹೊಸದಾಗಿ ಚಿನ್ನಕ್ಕಿಂತ ಬೇರೆಯಾಗಿ ಪದಕವು ಹುಟ್ಟಲಿಲ್ಲ ಎಂದು ವೇದಾಂತಿಯ ಆಶಯ. ಕಾರಣಕ್ಕಿಂತ ಕಾರ್ಯವು ಭಿನ್ನವಲ್ಲ.

ಈ ಸಿದ್ಧಾಂತಕ್ಕೆ ಇನ್ನೂ ಒಂದು ಯುಕ್ತಿ ಇದೆ-

ಕನಕಪ್ರಭೃತೇರ್ವ್ಯತಿರಿಕ್ತಮತೋ
ರುಚಕಾದಿ ನ ವಿದ್ಯತ ಏವ, ಕುತಃ ।
ಪೃಥಗಗ್ರಹಣಾತ್ ಕನಕಪ್ರಭೃತೇ –
ರಿತಿ ಕಾರಣಮೇವ ಸದನ್ಯದಸತ್ ॥ ೧೩೬

ಆದ್ದರಿಂದ ಚಿನ್ನವೇ ಮೊದಲಾದ್ದಕ್ಕಿಂತ ಬೇರೆಯಾಗಿ ರುಚಕಾದಿಯು ಇಲ್ಲವೇ ಇಲ್ಲ. ಏಕೆ ? ಚಿನ್ನವೇ ಮೊದಲಾದಕ್ಕಿಂತ ಬೇರೆಯಾಗಿ ರುಚಕಾದಿಯು ಕಾಣಿಸುವುದಿಲ್ಲ. ಆದಕಾರಣ ಕಾರಣವು ಮಾತ್ರ ಸತ್–ಸತ್ಯ. ಕಾರ್ಯವಾಗಿ ತೋರತಕ್ಕದ್ದುಅಸತ್–ಅಸತ್ಯ.

ಪದಕವು ಬೇರೆಯಾಗಿ ಹುಟ್ಟಿದೆ ಎಂದು ಹೇಳುವುದಾದರೆ ಚಿನ್ನಕ್ಕಿಂತ ಬೇರೆಯಾಗಿ ಪದಕವನ್ನು ತೋರಿಸಬೇಕು. ಅದು ಸಾಧ್ಯವಿಲ್ಲ. ಏವಂಚ ಉಪಾದಾನ ಕಾರಣವೇ ಕಾರ್ಯವಾಗಿ ಭ್ರಮೆಯಿಂದ ತೋರುತ್ತದೆಯೆಂದು ಒಪ್ಪಬೇಕಾಗುತ್ತದೆ, ಹಗ್ಗವು ಹಾವಾಗಿ ಕಾಣುವಂತೆ.

ನನು ನಾಮ ಪೃಥಿಗ್ವಿಕೃತಿಃ ಪ್ರಕೃತೇ–
ರಥರೂಪಮಥಾಪಿ ಚ ಕಾರ್ಯಮತಃ ।
ಕಥಮವ್ಯತಿರಿಕ್ತತಯಾವಗಮಃ
ಪ್ರಕೃತೇರ್ವಿಕೃತೇರಿತಿ ವಾಚ್ಯಮಿದಮ್ ॥ ೧೩೭

ಅಸತ್ಕಾರ್ಯವಾದಿಯಾದ ವೈಶೇಷಿಕನ ಆಕ್ಷೇಪ–

ಪ್ರಕೃತಿ(ಚಿನ್ನ)ಗಿಂತ ವಿಕೃತಿ (ಪದಕ)ಯು ಭಿನ್ನವೇ ಸರಿ. ಆದ್ದರಿಂದಲೇ ವಿಕೃತಿಯ ನಾಮ, ರೂಪಗಳು ಭಿನ್ನವಾಗಿರುತ್ತವೆ. ಆದ್ದರಿಂದ ಕಾರಣಕ್ಕಿಂತ ಕಾರ್ಯವು ಭಿನ್ನವೇ ಸರಿ. ಹೀಗಿರುವಾಗ ಪ್ರಕೃತಿಗಿಂತ ವಿಕೃತಿಯು ಅಭಿನ್ನವಾಗಿ ತೋರುವುದಾದರೂ ಹೇಗೆ ? ಇದಕ್ಕೆ ಉತ್ತರ ಹೇಳಬೇಕು.

**ವಿವರಣೆ** :–ಮಣ್ಣಿನ ಕಾರ್ಯ ಗಡಿಗೆ. ನೂಲಿನ ಕಾರ್ಯ ಬಟ್ಟೆ. ಮಣ್ಣು ನೂಲುಗಳಿಗಿಂತ ಗಡಿಗೆ ಬಟ್ಟೆಗಳ ಹೆಸರು ಆಕೃತಿಗಳು ವಿಭಿನ್ನವಾಗಿರುತ್ತವೆ. ಮಣ್ಣನ್ನು ಗಡಿಗೆಯೆಂದೂ ನೂಲನ್ನು ಬಟ್ಟೆಯೆಂದೂ ಯಾರೂ ಹೇಳುವುದಿಲ್ಲ. ಆದ್ದರಿಂದ ಕಾರ್ಯಕಾರಣಗಳು ಒಂದೇ ಎನ್ನುವುದು ಸರಿಯಲ್ಲ–ಎಂಬುದು ಆಕ್ಷೇಪ.

ಈ ಆಕ್ಷೇಪಕ್ಕೆ ವೇದಾಂತಿಯ ಉತ್ತರ–

ಇಹ ವೀರಣತಂತು ಸುವರ್ಣಮೃದಃ
ಕಟ-ಶಾಟಕ-ಹಾರ-ಘಟಾಕೃತಯಃ ।
ಉಪಲಬ್ಧೃಜನೈರುಪಲಬ್ಧಮತೋ
ನ ಭಿದಾಸ್ತಿ ತತಃ ಪ್ರಕೃತೇರ್ವಿಕೃತೇಃ ॥ ೧೩೮

ಲೋಕದಲ್ಲಿ ವೀರಣ (ಜಾಪೆಹುಲ್ಲು), ನೂಲು, ಚಿನ್ನ, ಮಣ್ಣು-ಇವು ಕ್ರಮವಾಗಿ ಜಾಪೆ, ಬಟ್ಟೆ, ಹಾರ, ಗಡಿಗೆಗಳ ಆಕಾರವನ್ನು ತಳೆದಿವೆ. ಕಾಣಬಲ್ಲ ಜನರು ಈ ವಿಷಯವನ್ನು ಕಣ್ಣಿಂದ ನೋಡಿ ತಿಳಿದುಕೊಂಡಿದ್ದಾರೆ. ಆದ್ದರಿಂದ ಪ್ರಕೃತಿಗಿಂತ ವಿಕೃತಿಯು ಬೇರೆಯಾದದ್ದಲ್ಲ.

ಹುಲ್ಲನ್ನು ಹೆಣೆಯುತ್ತಿರುವಾಗ ಹುಲ್ಲೇ ಜಾಪೆಯಾಗಿ ಕಾಣುತ್ತದೆ ಎಂಬುದು ಪ್ರತ್ಯಕ್ಷ. ಹೀಗೆಯೇ ಮಣ್ಣೇ ಗಡಿಗೆಯಾಗುತ್ತದೆಯೆನ್ನುವುದು ಕಂಡ ವಿಷಯ. ಹೊಸದಾಗಿ ಯಾವುದೂ ಹುಟ್ಟಲಿಲ್ಲ. ಮೂಲವಸ್ತು ಒಂದಾನೊಂದು ವಿಕಾರವನ್ನು ತಳೆದಿದೆಯೆಂಬುದು ಪ್ರತ್ಯಕ್ಷವಾದದ್ದು. ಅಷ್ಟು ಮಾತ್ರಕ್ಕೆ ಅವುಗಳಿಗೆ ಭೇದವಿದೆ ಎನ್ನುವುದು ಅಯುಕ್ತ.ಅಗಲವಾದ ಪಾತ್ರೆಯಿಂದ ಉದ್ದವಾದ ಪಾತ್ರೆಗೆ ಹಾಲನ್ನು ಹಾಕಿದರೆ ಹಾಲು ಉದ್ದುದ್ದವಾಗಿ ಕಾಣುತ್ತದೆ. ಅಷ್ಟರಿಂದ ಹಾಲು ಬೇರೆಯಾಗಿ ಹುಟ್ಟಿತೆಂದು ಹೇಳಬಹುದೆ ?

ವಿಕೃತಿರ್ಯದಿ ನಾಸ್ತಿ ಪೃಥಕ್ ಪ್ರಕೃತೇ-
ರ್ನ ಘಟೇತ ಭಿದಾಪ್ಯಭಿಧಾಪ್ರಭೃತೇಃ ।
ಇತಿ ಧೀರ್ವಿಫಲಾ ತವ ಯೇನ ಜನೈ
ರ್ವಿವಿದೇ ನಯನೇನ ಮೃದಾದ್ಯಭಿದಾ ॥ ೧೩೯

ಪ್ರಕೃತಿಗಿಂತ ವಿಕೃತಿಯು ಭಿನ್ನವಲ್ಲವಾದರೆ ಅವುಗಳ ನಾಮರೂಪಗಳು ಬೇರೆ ಬೇರೆಯಾಗಲು ಕಾರಣವಿಲ್ಲ-ಎಂದು ವೈಶೇಷಿಕನಾದ ನೀನು ಭಾವಿಸುವುದು ಯುಕ್ತವಲ್ಲ. ಏಕೆಂದರೆ, 'ಮಣ್ಣೇ ಗಡಿಗೆಯಾಗಿದೆ, ಗಡಿಗೆ ಅತಿರಿಕ್ತವಲ್ಲ, ಅವುಗಳಿಗೆ ಭೇದವಿಲ್ಲ' ಎಂಬುದನ್ನು ಜನರು ತಮ್ಮ ಕಣ್ಣುಗಳಿಂದಲೇ ಕಂಡಿರುತ್ತಾರೆ.

ಮಣ್ಣಿನಿಂದ ಗಡಿಗೆ, ಹಣತೆಗಳುಆಗುತ್ತವೆ. ಚಿನ್ನದಿಂದ ಉಂಗುರ, ಬಳೆಗಳು ಆಗುತ್ತವೆ. ಅವುಗಳ ನಾಮರೂಪಗಳು ಬೇರೆಯೆಂಬುದೇನೋ ದಿಟ. ಆದರೆಅದೆಲ್ಲವೂ ಕೃತಕವೆಂದು ನಾವೇ ಕಂಡಿರುತ್ತೇವೆ. ಲೋಕವ್ಯವಹಾರಲ್ಲಿ ಮಿಥ್ಯೆಸೇರಿಯೇ ಇರುತ್ತದೆ.

ನನು ರೂಪಮಥೋ ನನು ಕಾರ್ಯಮಥೋ
ಅಭಿಧಾಪಿ ನಟಸ್ಯ ಪೃಥಗ್ವಿದಿತಾ ।
ನ ಪೃಥಕ್ತ್ವಮುಪೈತಿ ನಟಃ ಕಿಮಿತಿ
ಪ್ರತಿವಾಚ್ಯಮವಶ್ಯಮಿದಂ ಕುಶಲೈಃ ॥ ೧೪೦

ನಟನು (ರಂಗಸ್ಥಳದಲ್ಲಿ ಅಭಿನಯಿಸುವಾಗ) ಪಾತ್ರಧಾರಿಯಾದ ಮನುಷ್ಯನಿಗಿಂತ ಆತನ ರೂಪ ಬೇರೆ, ಕೆಲಸ ಬೇರೆ, ಹೆಸರೂ ಬೇರೆ – ಎನ್ನುವುದು ಎಲ್ಲರಿಗೂ ಗೊತ್ತಿರುತ್ತದೆ. ಆದರೆ ಪಾತ್ರಧಾರಿಯಾದ ಮನುಷ್ಯನಿಗಿಂತ ನಟನು ಭಿನ್ನವ್ಯಕ್ತಿ ಎಂದು ಜನರೇಕೆ ಭಾವಿಸುವುದಿಲ್ಲ ? ಇದಕ್ಕೆ ಬುದ್ಧಿಶಾಲಿಗಳಾದ ತಾರ್ಕಿಕರು ಅವಶ್ಯ ಉತ್ತರವನ್ನು ಹೇಳಬೇಕು.

ಆದ್ದರಿಂದ ಅಸತ್ಕಾರ್ಯವಾದವೂ ಸರಿಯಲ್ಲ, ಸತ್ಕಾರ್ಯವಾದವೂ ಸರಿಯಲ್ಲ -

ಅಸತೋ ನ ಕಥಂಚನ ಜನ್ಮ ಭವೇತ್
ತದಸತ್ತ್ವತ ಏವ ಖಪುಷ್ಪಮಿವ ।
ನ ಸತೋಽಸ್ತಿ ಭವಃ ಪುರತೋಽಪಿ ಭವಾತ್
ಯತ ಆತ್ಮವದೇವ ಸದಿಷ್ಟಮಿತಿ ॥ ೧೪೧

ಅಸತ್ ಆದದ್ದು ಎಂದಿಗೂ ಹುಟ್ಟುವುದಿಲ್ಲ. ಏಕೆಂದರೆ, ಅದು ಗಗನ ಕುಸುಮದಂತೆ ಅಸತ್ ಆಗಿರುತ್ತದೆ. ಸದ್ವಸ್ತುವಾದರೋ ಮೊದಲೇ ಇರತಕ್ಕದ್ದಾದ್ದರಿಂದ ಅದಕ್ಕೆ ಹುಟ್ಟು ಘಟಿಸುವುದಿಲ್ಲ. ಏಕೆಂದರೆ, ಅದು ಆತ್ಮದಂತೆ ಸತ್ ಎಂದೇ ಅಂಗೀಕೃತವಾಗಿರುತ್ತದೆ.

ಅಸತ್ ಎಂದರೆ ಇಲ್ಲದೇ ಇರತಕ್ಕದ್ದು. ಗಗನಕುಸುಮ, ಮೊಲದ ಕೊಂಬು ಮೊದಲಾದ್ದು ಅಸತ್. ಅದು ಯಾವ ಸಂದರ್ಭದಲ್ಲಿಯೂ ಹುಟ್ಟುವುದಿಲ್ಲ. ಸತ್ ಎಂದರೆ ಯಾವಾಗಲೂ ಇರತಕ್ಕದ್ದು. ಆತ್ಮವು ಸತ್. ಅದು ಮತ್ತೆ ಹುಟ್ಟತಕ್ಕದ್ದಲ್ಲ. ಯಾವ ಪದಾರ್ಥವೆನಿಸಿದರೂ ಸತ್ ಅಥವಾ ಅಸತ್ ಆಗಿರಬೇಕು. ಇವೆರಡು ವಸ್ತುಗಳಿಗೂ ಜನ್ಮವೆನ್ನುವುದು ಕೂಡುವುದಿಲ್ಲ. ಸಾಂಖ್ಯರು ಸತ್ಕಾರ್ಯವಾದಿಗಳು. ಇದ್ದದ್ದೇ ಹುಟ್ಟುತ್ತದೆ ಎನ್ನುತ್ತಾರೆ. ಅದೂ ಅಸಂಗತವೆಂದು ಅಭಿಪ್ರಾಯ. ಇದುವರೆಗೆ ವೈಶೇಷಿಕರ ಅಸತ್ಕಾರ್ಯವಾದವು ಅಯುಕ್ತವೆಂದು ಹೇಳಿದ್ದಾಯಿತು.

ಇನ್ನು ಮುಂದೆ ಸಾಂಖ್ಯರ ಸತ್ಕಾರ್ಯವಾದವೂ ಸರಿಯಲ್ಲವೆಂದು ತೋರಿಸ ಲಾಗುತ್ತದೆ. ಸಾಂಖ್ಯರ ಹೇಳಿಕೆ ಹೀಗೆ–

ಕಪಿಲಾಸುರಿಪಂಚಶಿಖಾದಿಮತಂ
ಪರಿಗೃಹ್ಯ ವದೇದ್ಯದಿ ಕಶ್ಚಿದಿದಮ್ ।
ನ ಕದಾಚನ ಜನ್ಮ ವದಾಮಿ ಸತಃ
ಪ್ರವದಾಮಿ ತು ಯಚ್ಛೃಣು ತತ್ತ್ವಮಪಿ ॥ ೧೪೨

ಕಪಿಲ, ಆಸುರಿ, ಪಂಚಶಿಖ–ಮೊದಲಾದವರ ಸಾಂಖ್ಯಮತವನ್ನವಲಂಬಿಸಿ ಯಾವನಾದರೂ ಹೀಗೆ ಆಕ್ಷೇಪವನ್ನು ಹೇಳಿಯಾನು. ಎನೆಂದರೆ, "ಅಯ್ಯಾ, ನಾನು ಸದ್ವಸ್ತುವಿಗೆ ಜನ್ಮವಾಗುತ್ತದೆ–ಇದ್ದದ್ದೇ ಹುಟ್ಟುತ್ತದೆ ಎಂಬುದಾಗಿ ಎಂದಿಗೂ ಹೇಳುತ್ತಿಲ್ಲ. ನಾನು ಹೇಳುವುದೇನೆಂಬುದನ್ನಾದರೂ ಸರಿಯಾಗಿ ಕೇಳು.

ಪ್ರಕೃತಾವವಶಿಷ್ಟತಯಾ ಯದಭೂತ್
ಅಧುನಾ ತು ತದೇವ ವಿಶೇಷಯುತಮ್ ।
ನಿರವದ್ಯಮಿದಂ ಪ್ರತಿಭಾತಿ ಮಮ
ಪ್ರವದಾತ್ರ ವಿರೋಧಮವೈಷಿ ಯದಿ ॥ ೧೪೩

ಪ್ರಕೃತಿಯಾದ ಕಾರಣದಲ್ಲಿ ಮೊದಲು ಯಾವ ವಿಶೇಷವು ಇರಲಿಲ್ಲವೋ ಅದು ಈಗ ಕಾರ್ಯದಲ್ಲಿ ವಿಶೇಷಯಕ್ತವಾಗಿದೆ – ಎಂದು ಹೇಳುತ್ತೇನೆ. ಈ ಸಿದ್ಧಾಂತವು ನಿರ್ದುಷ್ಟವೆಂದು ನನಗೆ ತೋರುತ್ತದೆ. ಇದರಲ್ಲಿ ಏನಾದರೂ ದೋಷ ಕಾಣಿಸಿದರೆ ಹೇಳು.

ಸತ್ಕಾರ್ಯವಾದಿಗಳಾದ ಸಾಂಖ್ಯರು ಪರಿಣಾಮವಾದಿಗಳು. ಮಣ್ಣು ಗಡಿಗೆಯಾಗಿ ಪರಿಣಮಿಸುತ್ತದೆ. ಮಣ್ಣಿನಲ್ಲಿ ಗಡಿಗೆ ಮೊದಲೇ ಇರುತ್ತದೆ. ಅದರಲ್ಲೊಂದು ವಿಶೇಷವು ಕಾಣಿಸುತ್ತಿರಲಿಲ್ಲವಾದ್ದರಿಂದ ಗಡಿಗೆಯೆಂದು ಆಗ ವ್ಯವಹಾರವಿರಲಿಲ್ಲ. ವಿಶೇಷವು ಕಾಣಿಸಿಕೊಂಡಾಗ ವ್ಯವಹಾರ ಬರುತ್ತದೆ.

ಈ ಸಾಂಖ್ಯಮತದಲ್ಲಿ ದೋಷ ಉಂಟು –

ಸದಯುಜ್ಯತ ಯೇನ ಗುಣೇನ, ಪುರಾ
ಪ್ರಕೃತೌ ಸ ಇಹಾಸ್ತಿ ನ ವೇತಿ ವದ ।
ಯದಿ ವಿದ್ಯತ ಏವ ಪುರಾ ಪ್ರಕೃತೌ
ಅಧುನಾಪಿ ವಿಶೇಷಯುತತ್ವಮಸತ್ ॥ ೧೪೪

ಸತ್ ಆದ ಕಾರ್ಯವು ಯಾವ ಗುಣವಿಶೇಷದಿಂದ ಯುಕ್ತವಾಯಿತು–ಎಂದು ನೀನು ಹೇಳುತ್ತೀಯೋ ಆ ಗುಣವು ಪ್ರಕೃತಿಯಾದ ಕಾರಣದಲ್ಲಿ ಮೊದಲೇ ಇತ್ತೋ

ಇಲ್ಲವೋ ಎಂಬುದನ್ನು ಹೇಳು. ಪ್ರಕೃತಿಯಲ್ಲಿ ಮೊದಲೇ ಅದು ಇರುವುದಾದರೆ ಈಗ ಕಾರ್ಯಾವಸ್ಥೆಯಲ್ಲಿ ಪ್ರಕೃತಿಯು ಹೊಸದಾಗಿ ವಿಶೇಷಯುಕ್ತವಾಯಿತೆಂದು ಹೇಳುವುದು ಅಸಂಗತವಾಗುತ್ತದೆ.

ಮಣ್ಣಿನಲ್ಲಿ ಗುಣವಿಶೇಷವು ಸೇರಿದಾಗ ಗಡಿಗೆ ಗೋಚರಿಸುತ್ತದೆ ಎಂದು ಸಾಂಖ್ಯರ ಮತವಿದೆ. ಈಗ ಪ್ರಶ್ನೆ ಏನೆಂದರೆ, ಗುಣ ವಿಶೇಷವು ಮಣ್ಣಿನಲ್ಲಿ ಮೊದಲೇ ಇತ್ತೇ ಇಲ್ಲವೆ ? ಇತ್ತು ಎಂದರೆ ಹೊಸದಾಗಿ ಸೇರಿದಾಗ ಗಡಿಗೆ ಗೋಚರಿಸುತ್ತದೆ - ಎನ್ನುವುದು ತಪ್ಪಾಗುತ್ತದೆ.

ಯದಿ ನಾಸ್ತಿ ಪುರಾ ಸ ಗುಣಃ ಪ್ರಕೃತಾ –
ವಸದುದ್ಭವನಂ ಭವತೋऽಭಿಮತಮ್ ।
ಜನನೇನ ಚ ಸತ್ತ್ವಮುಪಾತ್ತವತೋ
ಜನಿಮತ್ತ್ವತ ಏವ ವಿನಷ್ಟಿರಪಿ ॥ ೧೪೫

ಪ್ರಕೃತಿಯಲ್ಲಿ ಆ ವಿಶೇಷಗುಣವು ಮೊದಲು ಇರಲಿಲ್ಲವೆಂದರೆ, ಅಸತ್ ಆದದ್ದು ಹುಟ್ಟುತ್ತದೆಯೆಂದು ನೀನು ಒಪ್ಪಿದಂತಾಗುತ್ತದೆ. ಹೀಗೆ ಜನ್ಮದಿಂದ ಒಂದು ವಸ್ತುವಿರುತ್ತದೆಯೆಂದು ಒಪ್ಪಿದ ಮೇಲೆ, ಅದಕ್ಕೆ ಜನ್ಯವಾದ್ದರಿಂದಲೇ ನಾಶವೂ ಇರಬೇಕಾಗುತ್ತದೆ.

ಸಾಂಖ್ಯಮತದಲ್ಲಿ ಹೊಸದಾಗಿ ಯಾವುದೂ ಹುಟ್ಟುವುದಿಲ್ಲ, ನಾಶವಾಗುವುದೂ ಇಲ್ಲವೆಂದು ಅಂಗೀಕರಿಸಿದ್ದಾರೆ. ಕಾರಣದಲ್ಲಿ ಇಲ್ಲದ್ದು ಕಾರ್ಯದಲ್ಲಿ ಹುಟ್ಟಿತೆಂದು ಒಪ್ಪಿದರೆ ಅಸತ್ಕಾರ್ಯವಾದವಾಗುತ್ತದೆ. ಜನ್ಯವಾದ ಮೇಲೆ ನಾಶವು ಇರಲೇಬೇಕು. ಏವಂಚ ವೈಶೇಷಿಕಮತಪ್ರವೇಶವೇ ಆಗಿಬಿಡುತ್ತದೆ. ವೈಶೇಷಿಕರು ಅಸತ್ಕಾರ್ಯವಾದಿಗಳು.

ಭವತೋऽಭಿಮತಂ ಪರಿಹರ್ತುಮಿದಂ
ನ ಕಥಂಚನ ಶಕ್ಯತ ಇತ್ಯಮುತಃ ।
ಕಣಭಕ್ಷಮತೇನ ಸಮತ್ವಮಿದಂ
ಭವತೋऽಭಿಮತಂ ಶನಕೈರಗಮತ್ ॥ ೧೪೬

ಅಸತ್ ಆದ ಗುಣವಿಶೇಷವು ಜನಿಸುತ್ತದೆಯೆನ್ನುವುದು ನಿನ್ನ ಅಭಿಮತವೆಂದು ಒಪ್ಪಬೇಕಾಗಿ ಬರುತ್ತದೆ. ಇದನ್ನು ಯಾವ ರೀತಿಯಲ್ಲಿಯೂ ಪರಿಹರಿಸಲು ಸಾಧ್ಯವಾಗುವುದಿಲ್ಲ. ಹೀಗಾಗಿ ನಿನ್ನ ಮತವು ಕಣಾದರ ವೈಶೇಷಕಮತದೊಡನೆ ಸಾಮ್ಯವನ್ನು ಮೆಲ್ಲಗೆ ಗಳಿಸಿಕೊಂಡಿತು !

ಅಸತೋ ಭವನಂ ನಶನಂ ಚ ಸತಃ
ಕಣಭೋಜಿಮತಂ ವಿದಿತಂ ಕವಿಭಿಃ ।
ಉಪಪತ್ತಿವಿರುದ್ಧತಯಾ ಸುಭೃಶಂ
ತದಭಾಣಿ ಮಯಾಪಿ ವಿರುದ್ಧತಯಾ ॥ ೧೪೭

ಅಸತ್ ಆದದ್ದು ಹುಟ್ಟುತ್ತದೆ, ಇರತಕ್ಕ ಸತ್ ನಾಶವಾಗುತ್ತದೆ – ಎನ್ನುವುದು ಕಣಾದರ ಮತವೆಂಬುದು ವಿದ್ವಾಂಸರಿಗೆ ತಿಳಿದದ್ದೇ ಆಗಿದೆ. ಅದು ಸರ್ವಥಾ ಯುಕ್ತಿ ವಿರುದ್ಧವಾದ್ದರಿಂದ ಅಸಂಗತವೆಂದು ನಾನು ಹಿಂದೆ ಪ್ರತಿಪಾದಿಸಿದ್ದೇನೆ. (ನೋಡಿ ಶ್ಲೋಕ. ೧೩೫ ರಿಂದ ೧೪೧)

ಪ್ರತಿಷಿದ್ಧಮಿದಂ ಕಣಭೋಜಿಮತಂ
ಹರಿಣಾಪಿ ಸಮಸ್ತಗುರೋರ್ಗುರುಣಾ ।
ವಚನೇನ ತು ನಾಸತ ಇತ್ಯಮುನಾ
ಬ್ರುವತಾ ಚ ಪೃಥಾತನಯಾಯ ಹಿತಮ್ ॥ ೧೪೮

ಸಮಸ್ತಗುರುಗಳಿಗೂ ಗುರುವಾದ ಶ್ರೀಕೃಷ್ಣನು ಅರ್ಜುನನಿಗೆ ಹಿತವನ್ನು ಉಪದೇಶಿಸುವಾಗ 'ನಾಸತೋ ವಿದ್ಯತೇಭಾವಃ' ಇತ್ಯಾದಿ ವಚನಗಳಿಂದ ಈ ವೈಶೇಷಿಕ ಮತವನ್ನು ನಿರಾಕರಿಸಿದ್ದಾನೆ.

'ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ = ಅಸತ್ ಆದದ್ದಕ್ಕೆ ಜನ್ಮವಿಲ್ಲ. ಸತ್ ಆದದ್ದಕ್ಕೆ ವಿನಾಶವೂ ಇಲ್ಲ' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ನುಡಿದಿದ್ದಾನೆ (ಗೀತಾ.೨–೨೬). ಹೀಗೆ ವೈಶೇಷಿಕ ಮತವನ್ನು ಖಂಡಿಸಿ ರುವುದರಿಂದ ಅಸತ್ಕಾರ್ಯವಾದವು ಅಯುಕ್ತ.

ಜೈನಮತದಲ್ಲಿಯೂ ದೋಷ ಉಂಟು–

ಅಸತಶ್ಚ ಸತಶ್ಚ ನ ಜನ್ಮ ಭವೇತ್
ಇತಿ ಪೂರ್ವಮವಾದ್ಯುಪಪತ್ತಿಯುತಮ್ ।
ಸದಸಚ್ಚ ನ ಜಾಯತ ಏವ ಕುತೋ
ನ ಹಿ ವಸ್ತು ತಥಾವಿಧಮಸ್ತಿ ಯತಃ ॥ ೧೪೯

ಅಸತ್ತಿಗೂ ಜನ್ಮವಾಗದು, ಸತ್ತಿಗೂ ಜನ್ಮವಾಗದು–ಎಂದು ಹಿಂದೆ ಯುಕ್ತಿ ಪೂರ್ವಕವಾಗಿ ಈ ಪ್ರಕಾರ ಸಿದ್ಧಮಾಡಲಾಯಿತು.ಆದರೆ ಸತ್ ಮತ್ತು ಅಸತ್ ಎರಡೂ ಆಗಿರತಕ್ಕವಸ್ತು ಏಕೆ ಹುಟ್ಟುವುದಿಲ್ಲ? (ಈ ಜೈನಮತದ ಆಕ್ಷೇಪಕ್ಕೆ

ಉತ್ತರವೇನೆಂದರೆ,) ಆ ರೀತಿಯಲ್ಲಿ ಸತ್ ಮತ್ತು ಅಸತ್ ಎರಡೂ ಆಗಿರತಕ್ಕ ವಸ್ತು ಇಲ್ಲವೇ ಇಲ್ಲ.

**ವಿವರಣೆ** :–ಜೈನರು ಅನೇಕಾಂತವಾದಿಗಳು. ಯಾವುದೂ ಏಕಾಂತವಾಗಿ–ಒಂದೇ ಸ್ವರೂಪದಲ್ಲಿ ಇರುವುದಿಲ್ಲ. ಸದಾಕಾಲದಲ್ಲಿಯೂ ಪ್ರತಿಯೊಂದು ಪದಾರ್ಥವೂ ಅನೇಕಾಂತವಾಗಿ–ಅನೇಕ ಸ್ವರೂಪವುಳ್ಳದ್ದಾಗಿ ಇರುತ್ತದೆ ಎನ್ನುತ್ತಾರೆ. ಇದಕ್ಕಾಗಿ 'ಸ್ಯಾದಸ್ತಿ–ಸ್ಯಾನ್ನಾಸ್ತಿ' ಎಂದು ಸಪ್ತಭಂಗಿಗಳನ್ನು ಯೋಜಿಸುತ್ತಾರೆ. ಇದಕ್ಕೆ ಸಪ್ತಭಂಗೀನಯವೆಂದೂ, ಸ್ಯಾದ್ವಾದವೆಂದು ಹೆಸರಿದೆ. ಅವರ ಮತದಲ್ಲಿ ಗಡಿಗೆ, ಪದಕ–ಮೊದಲಾದವು ಸತ್–ಅಸತ್ ಎರಡೂ ಏಕಕಾಲದಲ್ಲಾಗಬಹುದು. ಆದರೆ ಈ ಅನೇಕಾಂತವಾದವನ್ನು ಬೇರೆ ಯಾವ ದಾರ್ಶನಿಕರೂ ಒಪ್ಪಿಲ್ಲ. ಸತ್–ಅಸತ್ ಎಂದುಉಭಯಪ್ರಕಾರದ ವಸ್ತು ಇಲ್ಲವೆಂದು ಸಂಕ್ಷೇಪವಾಗಿ ಉತ್ತರ ಕೊಡಲಾಗಿದೆ.

ಸದಸತ್ತ್ವಮತೀತ್ಯ ಮನಃಪ್ರಭೃತೇ–
ರ್ನ ಕಥಂಚನ ವೃತ್ತಿರಿಹಾಸ್ತಿ ಯತಃ ।
ತತ ಏವ ಮನಃಪ್ರಮುಖಸ್ಯ ಭವೋ
ನ ಭವೇದಿತಿ ಸರ್ವಸುವೇದ್ಯಮಿತಿ ॥ ೧೫೦

ಸತ್, ಅಸತ್–ಎಂಬ ಎರಡು ಪ್ರಕಾರಗಳನ್ನು ಮೀರಿ ಮನಸ್ಸೇ ಮೊದಲಾದವುಗಳ ಇರುವಿಕೆ ಎಂದಿಗೂ ಶಕ್ಯವಲ್ಲವೆಂಬುದು ನಿಶ್ಚಿತವಾಯಿತು. ಆದ್ದರಿಂದಲೇ ಈ ಬಗೆಯ ವಸ್ತುವಿನ ಜನ್ಮ ಆಗಲಾರದೆಂದು ಸರ್ವರಿಗೂ ಸ್ಪಷ್ಟವಾಗಿ ತಿಳಿದು ಬರುತ್ತದೆ.

ಈ ಜಗತ್ತು ಸತ್ ಅಲ್ಲ, ಅಸತ್ ಅಲ್ಲ. ಸದಸತ್ ಎಂಬುದಂತೂ ಇಲ್ಲವೇ ಇಲ್ಲ. ಹಾಗಾದರೆ ಜಗತ್ತು ಏನಾಗಿರಬೇಕು ? ಇದಕ್ಕಿಂತ ಬೇರೆ ಪ್ರಕಾರದ ವಸ್ತು ಇರಲಾರದಾದ್ದರಿಂದ ಈ ಜಗತ್ತು ಇಲ್ಲ, ಇದು ಹುಟ್ಟಿಲ್ಲ ಎಂದು ತಿಳಿಯಬೇಕು. ಹಾಗಾದರೆ ಇಂದ್ರಿಯ ಗೋಚರವಾಗಿದೆಯಲ್ಲ ? ನಿಜ ; ಇದು ಅನಿರ್ವಚನೀಯವೆಂದು ವೇದಾಂತಿಯ ಅಭಿಪ್ರಾಯ. -

ಯದಿ ನಾಮ ಕಥಂಚಿದಮುಷ್ಯ ಭವಃ
ಸದತ್ತ್ವಮಪೇಕ್ಷ್ಯ ಭವಿಷ್ಯತಿ ವಃ ।
ಅಮೃಷಾತ್ವಮಮುಷ್ಯ ತಥಾಪಿ ನ ತು
ಶ್ರುತಿರಸ್ಯ ಮೃಷಾತ್ವಮುವಾಚ ಯತಃ ॥ ೧೫೧

ಸತ್ಕಾರ್ಯವಾದವಾಗಲಿ, ಅಸತ್ಕಾರ್ಯವಾದವಾಗಲಿ ನಿಮ್ಮ ಮತದಂತೆ ಒಂದು ವೇಳೆ ಈ ಜಗತ್ತು ಜನಿಸಿದೆಯೆಂದು ಒಪ್ಪಿಕೊಂಡರೂ ಈ ಜಗತ್ತು ಸತ್ಯವಲ್ಲ ಎಂದು ನಿಶ್ಚಯಿಸಬೇಕು. ಏಕೆಂದರೆ, ಈ ಜಗತ್ತು ಮಿಥ್ಯೆಯೆಂದು ಶ್ರುತಿಯು ಹೇಳಿದೆ.

**ಆತ್ಮೈವೇದಂ ಸರ್ವಂ** (ಛಾಂ. ೨-೧೫-೨), **ಬ್ರಹ್ಮೈವೇದಂ ವಿಶ್ವಂ** (ಮುಂ ೨-೨-೧೧) **ಸರ್ವಂ ಖಲ್ವಿದಂ ಬ್ರಹ್ಮ** (ಛಾಂ ೩-೧೪-೧ ಇತ್ಯಾದಿ) ಶ್ರುತಿಗಳು ಸರ್ವವೂ ಬ್ರಹ್ಮ ವೆಂದು ಹೇಳುವುದರ ಮೂಲಕ ಬ್ರಹ್ಮಾತಿರಿಕ್ತವಾದದ್ದು ಇಲ್ಲ, ಕಾಣಿಸತಕ್ಕದ್ದು ಮಿಥ್ಯೆ ಎಂದು ಸೂಚಿಸುತ್ತವೆ. **ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ** (ಛಾಂ. ೬-೪-೧) ಎಂಬ ವಚನವು ಜಗತ್ತೆಲ್ಲವೂ ಮಿಥ್ಯೆಯೆಂದು ಸಾರಿದೆ.

**ಮನಸೋಽನ್ಯತತ್ತ್ವಮವಾದಿ ಯತಃ**
**ತತ ಏವ ಹಿ ತಸ್ಯ ಮೃಷಾ ಚರಿತಮ್ ।**
**ಯತ ಏವ ಮೃಷಾ ಮನಸಶ್ಚರಿತಂ**
**ತತ ಏವ ಪುರೋದಿತಸಿದ್ಧಿರಭೂತ್ ॥** ೧೫೨

ಈ ಪ್ರಕಾರವಾಗಿ ಮನಸ್ಸು ಅಸತ್ಯವಾದದ್ದೆಂದು ಸಾಧಿಸಿದ್ದರಿಂದ ಅದರ ಜಾಗ್ರದಾದಿ ವೃತ್ತಿಯೂ ಅಸತ್ಯವೆಂದು ಸಿದ್ಧವಾಯಿತು. ಮನೋವೃತ್ತಿಯಾದ ಜಾಗ್ರದಾದ್ಯವಸ್ಥೆಯು ಮಿಥ್ಯೆಯಾದ್ದರಿಂದ ಹಿಂದೆ ಹೇಳಿದಂತೆ ಆತ್ಮನಿಗೆ ಯಾವ ಅವಸ್ಥೆಯೂ ಇಲ್ಲ, ಅವನು ತುರೀಯನೆನ್ನುವುದೂ ಸಾಪೇಕ್ಷವಾಗಿ–ಎಂಬುದು ಸಿದ್ಧವಾಯಿತು.

**ಯದಪೇಕ್ಷ್ಯತು ನಾಮ ಭವೇತ್ತ್ರಿತಯಂ**
**ಪರಮಾತ್ಮ ಪದಸ್ಯ ತುರೀಯಮಿತಿ ।**
**ತದಸತ್ಯಮಸತ್ಯಗುಣಸ್ತು ಯತಃ**
**ಪರಿನಿರ್ಮಿತಸರ್ಪವಿಸರ್ಪಣವತ್ ॥** ೧೫೩

ಜಾಗ್ರತ್, ಸ್ವಪ್ನ, ಸುಷುಪ್ತಿ–ಎಂಬ ಮೂರು ಅವಸ್ಥೆಗಳನ್ನೊಪ್ಪಿಕೊಂಡಾಗ ಪರಮಾತ್ಮನು ಈ ತ್ರಿತಯವು ಇಲ್ಲದ ತುರೀಯನೆಂಬ ವ್ಯವಹಾರ ಬರುತ್ತದೆ. ಆ ಅವಸ್ಥಾತ್ರಯವು ಅಸತ್ಯವಾದದ್ದು. ನಾವು ಭ್ರಮೆಯಿಂದ ಕಲ್ಪಿಸಿಕೊಂಡ ಸರ್ಪದಲ್ಲಿ "ಹರೆಯುವುದು"ಎಂಬ ಕ್ರಿಯೆ ಹೇಗೋ ಹಾಗೆ ಕಲ್ಪಿತ ಮನಸ್ಸಿನಲ್ಲಿ ವೃತ್ತಿಯೆಂಬ ಧರ್ಮವೂ ಅಸತ್ಯವಾದದ್ದು. ಈ ಅಸತ್ಯಗುಣವನ್ನು ಆರೋಪಿಸಿ ಪರಮಾತ್ಮನು ತುರೀಯನೆಂದು ಸಾಪೇಕ್ಷವಾಗಿ ಹೇಳುತ್ತೇವೆ.

ನಿಖಿಲಸ್ಯ ಮನಃಪ್ರಮುಖಸ್ಯ ಯತೋ
ವಿತಥತ್ವಮವಾದಿ ಪುರಾ ತು ಮಯಾ ।
ಶ್ರುತಿಯುಕ್ತಿಬಲೇನ ತತೋಽದ್ವಯಕಂ
ಪರಮಕ್ಷರಮೇವ ಸದನ್ಯದಸತ್ ॥ ೧೫೪

ಮನಸ್ಸು ಮೊದಲಾದ ಜಗತ್ತು ಮಿಥ್ಯೆಯೆಂಬುದಾಗಿ ವೇದಾಧಾರದಿಂದಲೂ ಯುಕ್ತಿ ಬಲದಿಂದಲೂ ಹಿಂದೆ ಪ್ರತಿಪಾದಿಸಿದ್ದೇನೆ. ಆದ್ದರಿಂದ ಅದ್ವಿತೀಯವೂ ಅವಿನಾಶಿಯೂ ಆದ ಪರಬ್ರಹ್ಮವೊಂದೇ ಸತ್, ಉಳಿದುದೆಲ್ಲ ಅಸತ್-ಎಂದು ತಿಳಿಯಬೇಕು.

ತದಪೂರ್ವಮಬಾಹ್ಯಮನಂತರಕಂ
ನ ಚ ಕಿಂಚನ ತಸ್ಯ ಭವತ್ಯಪರಮ್ ।
ಇತಿ ವೇದವಚೋಽನುಶಶಾಸ ಯತೋ
ವಿತಥಂ ಪರತೋಽನ್ಯದತಃ ಪ್ರಗತಮ್ ॥ ೧೫೫

ಆ ಬ್ರಹ್ಮವು **ಅಪೂರ್ವಂ** = ಕಾರಣರಹಿತವೂ, **ಅಬಾಹ್ಯಂ** = ಬಾಹ್ಯವಸ್ತು ಶೂನ್ಯವೂ **ಅನಂತರಕಂ** = ತನ್ನೊಳಗೆ ಇನ್ನೊಂದಿಲ್ಲದ್ದೂ ಆಗಿದೆ. ಅದಕ್ಕೆ ಯಾವ **ಅಪರಂ** = ಕಾರ್ಯವೂ ಇಲ್ಲ ಎಂಬುದಾಗಿ ವೇದವು ಉಪದೇಶ ಮಾಡಿದೆ. ಆದ್ದರಿಂದ ಬ್ರಹ್ಮಕ್ಕೆ ಭಿನ್ನವಾಗಿ ಕಾಣತಕ್ಕವಸ್ತು ಮಿಥ್ಯೆಯೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

**'ತದೇತದ್ ಬ್ರಹ್ಮಾಪೂರ್ವಮನಪರಮನಂತರಮಬಾಹ್ಯಮಯಮಾತ್ಮಾ ಬ್ರಹ್ಮ ಸರ್ವಾನುಭೂರಿತ್ಯನುಶಾಸನಮ್'** (ಬೃಹ.೨-೫-೧೯) ಎಂಬ ಉಪನಿಷದ್ವಚನದ ಅನುವಾದ ಇದು.

**ಟಿಪ್ಪಣಿ** :- ಮುದ್ರಿತ ಶ್ಲೋಕದಲ್ಲಿ **'ಯದಿ ಪೂರ್ವಮಬಾಹ್ಯ...'** ಎಂದು ಇದ್ದ ಪಾಠವು ಸರಿಯಲ್ಲವೆಂದು ಮೇಲ್ಕಂಡಂತೆ ಪರಿಷ್ಕರಿಸಲಾಗಿದೆ. **'ಯದಪೂರ್ವಂ....'** ಎಂದೂ ತಿದ್ದಲು ಸಾಧ್ಯವಿದೆ.

ಪ್ರತಿಷಿಧ್ಯ ಯತೋ ಬಹಿರಂತರಪಿ
ಸ್ವವಿಲಕ್ಷಣಮಾತ್ಮನ ಉಕ್ತವತೀ ।
ಅವಬೋಧಘನತ್ವಮತೋಽನ್ಯದಸತ್
ಲವಣೈಕರಸತ್ವನಿದರ್ಶನತಃ ॥ ೧೫೬

ಆತ್ಮನಿಗೆ ಹೊರಗಾಗಲಿ ಒಳಗಾಗಲಿ ತನಗಿಂತ ವಿಲಕ್ಷಣವಾದ ಇನ್ನೊಂದು ವಸ್ತುವನ್ನು ಪ್ರತಿಷೇಧ ಮಾಡಿ, ಆತ್ಮನು ಪ್ರಜ್ಞಾನಘನನೆಂಬುದಾಗಿ ಶ್ರುತಿಯು ಹೇಳಿದೆ. ಅಲ್ಲದೆ ಸೈಂಧವಘನದ ಉದಾಹರಣೆಯನ್ನು ಕೊಟ್ಟಿದೆ. ಆದಕಾರಣ ಆತ್ಮನಿಗೆ ಭಿನ್ನವಾದದ್ದೆಂಬುದು ಅಸತ್.

'ಸ ಯಥಾ ಸೈಂಧವಘನೋಽನಂತರೋಽಬಾಹ್ಯಃ ಕೃತ್ಸ್ನೋ ರಸಘನ ಏವೈವಂ ವಾ ಅರೇಽಯಮಾತ್ಮಾನಂತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವ' (ಬೃಹ. ೪-೫-೧೩). ಉಪ್ಪಿನ ಉಂಡೆ ಯಾವ ರೀತಿಯಲ್ಲಿ ಬರಿಯ ಉಪ್ಪೇ ಆಗಿರುತ್ತದೆಯೋ ಹಾಗೆ ಆತ್ಮನು ಜ್ಞಾನಘನವಾಗಿರುತ್ತಾನೆ. ಅವನ ಒಳಗೆ ಹೊರಗೆ ಇನ್ನೊಂದು ಇಲ್ಲ.

**ಲವಣೈಕರಸತ್ವಸಮಂ ಘಣಿತಂ**
**ಸ್ವವಿಲಕ್ಷಣವಸ್ತುನಿಷೇಧನತಃ ।**
**ಅವಬೋಧಘನಂ ಪರಮಾತ್ಮಪದಂ**
**ತ್ವಮವೇಹಿ ತದಸ್ಮಿ ಸದಾಹಮಿತಿ ॥** **೧೫೭**

ಪರಮಾತ್ಮನಿಗಿಂತ ಭಿನ್ನವಸ್ತುವಿಲ್ಲವೆಂದು ನಿಷೇಧಿಸಿ, ಆತನು ಉಪ್ಪಿನ ರಸಗಟ್ಟಿಯಂತೆ ಜ್ಞಾನಘ್ನನನೆಂದು ಶ್ರುತಿಯಲ್ಲಿ ಉಕ್ತವಾಗಿದೆ. ನಾನು ಸರ್ವದಾ ಆ ಸದ್ವಸ್ತುವೇ ಆಗಿದ್ದೇನೆಂದು ತಿಳಿದುಕೊ.

ಟಿಪ್ಪಣಿ-ಘಣಿತಂ= ಭಣಿತಂ, ಉಕ್ತವಾಗಿದೆಯೆಂದರ್ಥ.

**ಅಣು ನೋ ನ ಚ ತದ್ವಿಪರೀತಗುಣಂ**
**ನ ಚ ಹ್ರಸ್ವಮತೋ ನ ಚ ದೀರ್ಘಮಪಿ ।**
**ಪ್ರತಿಷಿದ್ಧ ಸಮಸ್ತ ವಿಶೇಷಣಕಂ**
**ಪರಮಕ್ಷರಮಾತ್ಮತಯಾಶ್ರಯ ಭೋಃ ॥** **೧೫೮**

ಅಕ್ಷರವಾದ ಆ ಪರವಸ್ತುವು ಅಣುವೂ ಅಲ್ಲ, ಅದಕ್ಕೆ ವಿಪರೀತವಾದ ಮಹತ್ವಗುಣವುಳ್ಳದ್ದೂ ಅಲ್ಲ. ಹ್ರಸ್ವವೂ ಅಲ್ಲ, ಧೀರ್ಘವೂ ಅಲ್ಲ. ಸಮಸ್ತ ವಿಶೇಷ ಗುಣಗಳಿಂದಲೂ ರಹಿತವಾದ ಪರವಸ್ತುವೇ ನನ್ನ ಆತ್ಮವೆಂದು ಆಶ್ರಯಿಸು, ಹೇ ಶಿಷ್ಯ.

ಅಸುಬುದ್ಧಿಶರೀರಗುಣಾನ್ ಷಡಿಮಾನ್
ಅವಿವೇಕಿಜನೈರ್ದೃಶಿಧರ್ಮತಯಾ ।
ಪ್ರತಿಪನ್ನತಮಾನ್ ಪ್ರವಿಹಾಯ ಶನೈಃ
ದೃಶಿಮಾತ್ರಮವೇಹಿ ಸದಾಹಮಿತಿ ॥ ೧೫೯

ಹಸಿವು, ಬಾಯಾರಿಕೆ, ಸುಖ, ದುಃಖ, ಜನನ, ಮರಣಗಳೆಂಬ ಆರು ಗುಣಗಳು ಪ್ರಾಣ, ಬುದ್ಧಿ ಮತ್ತು ಶರೀರದ ಧರ್ಮಗಳು. ಇವು ದೃಕ್ ಸ್ವರೂಪನಾದ ಆತ್ಮನ ಧರ್ಮಗಳೆಂದು ಅಜ್ಞರಾದ ಜನರು ಕಲ್ಪಿಸಿಕೊಂಡಿದ್ದಾರೆ. ಈ ಅಜ್ಞಾನವನ್ನು ಮೆಲ್ಲಗೆ ಅಲ್ಲಗಳೆದು 'ನಾನು ದೃಕ್ ಸ್ವರೂಪನಾದ ಕೇವಲಾತ್ಮನೇ ಸದಾ ಆಗಿದ್ದೇನೆ' ಎಂದು ತಿಳಿದುಕೊ.

ಟಿಪ್ಪಣಿ –

| | | |
|---|---|---|
| ಹಸಿವು, ಬಾಯಾರಿಕೆ | = | ಪ್ರಾಣಗುಣ |
| ಸುಖ,ದುಃಖ | = | ಬುದ್ಧಿಗುಣ |
| ಜನನಮರಣ | = | ಶರೀರಗುಣ |

ಅಹಿನಿರ್ಲ್ವಯನೀಮಹಿರಾತ್ಮತಯಾ
ಜಗೃಹೇ ಪರಿಮೋಕ್ಷಣತಸ್ತು ಪುರಾ ।
ಪರಿಮುಚ್ಯ ತು ತಾಮುರಗಃ ಸ್ವಬಿಲೇ
ನ ಪುನಃ ಸಮವೇಕ್ಷತ ಆತ್ಮತಯಾ ॥ ೧೬೦

ಸರ್ಪವು ಪೊರೆಯನ್ನು ಕಳಚುವುದಕ್ಕೆ ಮೊದಲು ಸರ್ಪದ ಪೊರೆಯು ತನ್ನದೆ ತಾನೇ ಎಂದು ತಿಳಿದುಕೊಂಡಿತ್ತು. ಅದನ್ನು ಪೊಟರೆಯಲ್ಲಿ ಕಳಚಿ ಹಾಕಿದ ಮೇಲೆ, ಪೊರೆಯು ತನ್ನದೆಂದು ಕಣ್ಣೆತ್ತಿಯೂ ನೋಡುವುದಿಲ್ಲ!

'ಯಥಾ ಅಹಿನಿರ್ಲ್ವಯನೀ ವಲ್ಮೀಕೇ ಮೃತಾ ಪ್ರತ್ಯಸ್ತಾ ಶಯೀತೈವಮೇ ವೇದಂ ಶರೀರಂ ಶೇತೇ' (ಬೃಹಃ ೪–೪–೭). ಜೀವನ್ಮುಕ್ತನಾದ ಜ್ಞಾನಿಯು ಸರ್ಪಸ್ಥಾನೀಯ. ಶರೀರವು ಪೊರೆಯಿದ್ದಂತೆ. ಜ್ಞಾನಿಯು ಬದುಕಿದ್ದರೂ ಶರೀರಾತ್ಮ ಭಾವವನ್ನು ತ್ಯಜಿಸಿರುವುದರಿಂದ ಅಶರೀರನೆಂದು ತಿಳಿಯಬೇಕು.

ಅವಿವೇಕತ ಆತ್ಮತಯಾ ವಿದಿತಂ
ಕುಶರೀರಮಿದಂ ಭವತಾಪ್ಯಹಿವತ್ ।
ಅಹಿವತ್ತ್ಯಜ ದೇಹಮಿಮಂ ತ್ವಮಪಿ
ಪ್ರತಿಪದ್ಯ ಚಿದಾತ್ಮಕಮಾತ್ಮತಯಾ ॥ ೧೬೧

ಸರ್ಪವು ಪೊರೆಯನ್ನು ತನ್ನ ದೇಹವೆಂದು ತಿಳಿದುಕೊಂಡಂತೆ ನೀನೂ ಸಹ ಈ ಕುತ್ಸಿತಶರೀರವನ್ನು ಅವಿವೇಕದಿಂದ ಆತ್ಮವೆಂದು ತಿಳಿದುಕೊಂಡಿದ್ದೆ. ಚಿದಾತ್ಮನೇ ನಿನ್ನ ಆತ್ಮವೆಂದು ನಿಶ್ಚಯಿಸಿ ಈ ದೇಹವನ್ನು ಆ ಸರ್ಪದಂತೆಯೇ–ಸರ್ಪವು ಪೊರೆಯನ್ನು ತ್ಯಜಿಸಿದಂತೆಯೇ–ತ್ಯಜಿಸಿಬಿಡು.

ದೇಹವನ್ನು ತ್ಯಜಿಸುವುದೆಂದರೆ ದೇಹಾಭಿಮಾನವನ್ನು ತ್ಯಜಿಸಬೇಕೆಂದರ್ಥ. ದೇಹವೇ ನಾನೆಂಬ ಭಾವನೆಯನ್ನು ತ್ಯಜಿಸಿದಾಗ ಆತನು ಅಶರೀರನೇ.

**ರಜನೀದಿವಸೌ ನ ರವೇರ್ಭವತಃ**
**ಪ್ರಭಯಾ ಸತತಂ ಯುತ ಏಷ ಯತಃ ।**
**ಅವಿವೇಕ ವಿವೇಕ ಗುಣಾವಪಿ ತೌ**
**ಭವತೋ ನ ರವೇರಿವ ನಿತ್ಯದೃಶೇಃ ॥** ೧೬೨

ಸೂರ್ಯನಿಗೆ ರಾತ್ರಿಯಾಗಲಿ ಹಗಲಾಗಲಿ ಇರುವುದಿಲ್ಲ. ಏಕೆಂದರೆ, ಆತನು ಸದಾ ಪ್ರಕಾಶಯುಕ್ತನಾಗಿ ಪ್ರಕಾಶಿಸುತ್ತಲೇ ಇರುವನು. ಸೂರ್ಯನಿಗೆ ಹೇಗೆ ರಾತ್ರಿ ಹಗಲು ಗಳಿಲ್ಲವೋ ಹಾಗೆಯೇ ನಿತ್ಯದೃಕ್‌ಸ್ವರೂಪನಾದ –ಸ್ವಯಂಪ್ರಕಾಶನಾದ ಆತ್ಮನಿಗೆ ಅವಿವೇಕ ವಿವೇಕಗಳೂ ಇಲ್ಲ.

ಆತ್ಮನು ಜ್ಞಾನಘನನಾಗಿದ್ದಾನೆ. ವಿವೇಕ ಸ್ವರೂಪನೇ ಆಗಿದ್ದಾನೆ. ಅವನಿಗೆ ಹೊಸದಾಗಿ ವಿವೇಕವು ಬರಬೇಕಾಗಿಲ್ಲ. ಸೂರ್ಯನಿಗೆ ಬೆಳಕು ಬರಬೇಕಾಗಿಲ್ಲ. ಅವಿವೇಕ, ವಿವೇಕಗಳು ಬುದ್ಧಿಗೆ, ಆತ್ಮನಿಗಲ್ಲ.

**ಪರಿಶುದ್ಧ ವಿಬುದ್ಧ ವಿಮುಕ್ತದೃಶೇಃ**
**ಅವಿವೇಕವಿವೇಕ ವಿವರ್ಜನತಃ ।**
**ಮಮ ಬಂಧವಿಮೋಕ್ಷಗುಣೌ ಭವತೋ**
**ನ ಕದಾ ಚಿದಪೀತ್ಯವಗಚ್ಛ ಭೃಸಮ್ ॥** ೧೬೩

ನಿತ್ಯಶುದ್ಧ–ಬುದ್ಧ–ಮುಕ್ತ ದೃಕ್‌ಸ್ವರೂಪನಾದ ನನಗೆ ಅಜ್ಞಾನವು ಮುಸುಕುವು ದಾಗಲಿ ಹೊಸದಾಗಿ ಜ್ಞಾನವು ಬರುಪುದಾಗಲಿ ಇಲ್ಲವಾದ್ದರಿಂದ, 'ನನಗೆ ಬಂಧ ಮೋಕ್ಷಗಳು ಯಾವಾಗಲೂ ಇಲ್ಲ' ಎಂಬುದಾಗಿ ನೀನು ದೃಢವಾಗಿ ತಿಳಿದುಕೋ.

ಆತ್ಮನಿಗೆ ಕರ್ಮಗಳು ಲೇಪವು ಯಾವಾಗಲೂ ಇಲ್ಲ, ಆತನು ಸತ್ಯಜ್ಞಾನ ಸ್ವರೂಪನೂ ನಿತ್ಯಮುಕ್ತನೂ ಆಗಿದ್ದಾನೆ. ಅಜ್ಞಾನವಾಗಲಿ ವೃತ್ತಿರೂಪಜ್ಞಾನವಾಗಲಿ ಅಂತಃಕರಣಕ್ಕೆ ಮಾತ್ರ, ಆತ್ಮನಿಗಲ್ಲ.

ನ ಮಮ ಗ್ರಹಣೋಜ್ಝನಮಸ್ತಿ ಮಯಾ
ನ ಪರೇಣ ದೃಶೇರಿತಿ ನಿಶ್ಚಿನು ಭೋಃ ।
ನ ಹಿ ಕಸ್ಯಚಿದಾತ್ಮನಿ ಕರ್ಮ ಭವೇತ್
ನ ಹಿ ಕಶ್ಚಿದಿಹಾಸ್ತಿ ಮದನ್ಯ ಇತಿ ॥ ೧೬೪

ದೃಗಾತ್ಮನಾದ ನನಗೆ ಗ್ರಹಣ, ತ್ಯಾಗ–ಇತ್ಯಾದಿ ಕ್ರಿಯೆಯಿಲ್ಲವೆಂದು, ಎಲೈ ಶಿಷ್ಯನೆ, ನಿಶ್ಚಯಿಸಿಕೋ. ಈ ಕ್ರಿಯೆಯು ನನ್ನಿಂದಾಗಲಿ· ಇನ್ನೊಬ್ಬನಿಂದಾಗಲಿ ಉತ್ಪನ್ನವಾಗಲಾರದು. ಏಕೆಂದರೆ, ಯಾರಿಗೂ ತನ್ನಲ್ಲಿಯೇ ಕ್ರಿಯೆ ಹುಟ್ಟುವುದಿಲ್ಲ.ಇನ್ನೊಬ್ಬನಿಂದ ಹುಟ್ಟುವುದಾದರೆ, ನನಗಿಂತ ಇನ್ನೊಬ್ಬನೇ ಇಲ್ಲ !

ಆತ್ಮನಲ್ಲಿ ಯಾವ ಕ್ರಿಯೆಯೂ ಇಲ್ಲವೆಂದು ವೇದಾಂತ ಸಿದ್ಧಾಂತವಿದೆ. ಅದನ್ನು ಈ ಶ್ಲೋಕದಲ್ಲಿ ತಿಳಿಸಿ ನೈಷ್ಕರ್ಮ್ಯವನ್ನು ಉಪಪಾದಿಸಿದ್ದಾರೆ. 'ಸ್ವಾತ್ಮನಿ ಕ್ರಿಯಾ ವಿರೋಧಾತ್' ಎಂದು ಸಿದ್ಧಾಂತ ಉಂಟು. ಬೇರೊಂದು ವಸ್ತುವಿಲ್ಲದೆ ತನ್ನಲ್ಲಿಯೇ ಕ್ರಿಯೆ ಹುಟ್ಟುವುದಿಲ್ಲ. ಆತ್ಮನಿಗಿಂತ ಬೇರೊಂದು ವಸ್ತುವಿಲ್ಲ. ಆದ್ದರಿಂದ ಆತ್ಮಸ್ವರೂಪದಲ್ಲಿ ಕ್ರಿಯೆಯಿಲ್ಲವೆಂದು ತಿಳಿಯಬೇಕು.

ಅಹಮಸ್ಮಿ ಚರಸ್ಥಿರದೇಹಧಿಯಾಂ
ಚರಿತಸ್ಯ ಸದೇಕ್ಷಕ ಏಕ ಇತಿ।
ನ ಭವೇದತ ಏವ ಮದನ್ಯ ಇತಿ
ತ್ವಮವೇಹಿ ಸುಮೇಧ ಇದಂ ಸುದೃಢಮ್ ॥ ೧೬೫

ಎಲೈ ಬುದ್ಧಿಶಾಲಿಯೆ, ಸ್ಥಾವರಜಂಗಮ ಪದಾರ್ಥಗಳಿಗೂ ದೇಹಕ್ಕೂ ಬುದ್ಧಿಗೂ ಇವುಗಳ ಕ್ರಿಯೆಗೂ ಸರ್ವದಾ ಸಾಕ್ಷಿಯಾಗಿರತಕ್ಕ ನಾನು ಅದ್ವಿತೀಯನೆಂದು ತಿಳಿ. ಆದ್ದರಿಂದಲೇ ನನಗಿಂತ ಅತಿರಿಕ್ತನಾದ ಇನ್ನೊಬ್ಬನಿಲ್ಲವೆಂದು ದೃಢವಾಗಿನಿಶ್ಚಯಿಸಿಕೊ.

'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ಶ್ರುತಿವಾಕ್ಯಗಳು ಬ್ರಹ್ಮವಸ್ತುವಿಗೆ ಹೊರತಾಗಿ ಇನ್ನೊಂದಿಲ್ಲವೆಂದು ಖಚಿತವಾಗಿ ತಿಳಿಸಿಕೊಟ್ಟಿವೆ. ಆದ್ದರಿಂದ ಸ್ಥಾವರ ಜಂಗಮಾದಿಗಳೆಲ್ಲವೂ ಮಾಯಾಕಲ್ಪಿತಗಳೆಂದೂ ಪರಮಾರ್ಥವಸ್ತುಗಳಲ್ಲವೆಂದೂ ಅಭಿಪ್ರಾಯ.

ಗಗನೇ ವಿಮಲೇ ಜಲದಾದಿಮಲೇ
ಸತಿ ವಾಽಸತಿ ವಾ ನ ಭಿದಾಸ್ತಿ ಯಥಾ ।
ತ್ವಯಿ ಸರ್ವಗತೇ ಪರಿಶುದ್ಧದೃಶೋ
ನ ಭಿದಾಸ್ತಿ ತಥಾ ದ್ವಯಭೇದಕೃತಾ ॥ ೧೬೬

ಆಕಾಶವು ಸ್ವಚ್ಛವಾಗಿರಲಿ ಅಥವಾ ಮೋಡ ಮೊದಲಾದವುಗಳಿಂದ ಮಲಿನವಾಗಿರಲಿ ಆಕಾಶದಲ್ಲಿ ಸ್ವತಃ ಯಾವ ವಿಶೇಷವೂ (ಭೇದವೂ) ಇರುವುದಿಲ್ಲ. ಹಾಗೆಯೇ ನೀನು ಸರ್ವಗತನಾಗಿದ್ದರೂ ಪರಿಶುದ್ಧ ದೃಕ್ ಸ್ವರೂಪನಾದ ನಿನಗೆ ದ್ವೈತಭೇದದಿಂದುಂಟಾದ ಯಾವ ವಿಶೇಷವೂ ಇರುವುದಿಲ್ಲ.

ಆಕಾಶವು ಸದಾ ಸ್ವಚ್ಛವಾದದ್ದು. ಮೋಡ, ಧೂಳಿ–ಮೊದಲಾದವು ಆಕಾಶಕ್ಕೆ ಅಂಟಿಕೊಳ್ಳಲಾರವು. ಅವು ಕಾಣಿಸುವುದರಿಂದ ಆಕಾಶಕ್ಕೆ ಕೊಳೆ ತಗುಲಿದೆಯೆಂದು ನಾವು ಭ್ರಮಿಸುತ್ತೇವೆ. ಅದರಂತೆ ಆತ್ಮನು ಸರ್ವಗತನಾದರೂ ಸದಾ ಪರಿಶುದ್ಧನಾಗಿಯೇ ಇರುತ್ತಾನೆ. ಯಾವುದರ ಲೇಪವೂ ಆತನಿಗಿಲ್ಲ.

ಅನೃತಂ ದ್ವಯಮಿತ್ಯವದಾಮ ಪುರಾ
ವ್ಯವಹಾರಮಪೇಕ್ಷ್ಯ ತು ಗೀತಮಿದಮ್ ॥
ಅನೃತೇನ ನ ಸತ್ಯಮುಪೈತಿ ಯುಜಾಂ
ನ ಮರೀಚಿಜಲೇನ ನದೀ ಹ್ರದಿನೀ ॥ ೧೬೭

ದ್ವೈತವು ಅಸತ್ಯವೆಂದು ನಾವು ಹಿಂದೆ ಹೇಳಿದೆವು. ಹೀಗೆ ಹೇಳಿದ್ದು ವ್ಯವಹಾರದೃಷ್ಟಿಯಿಂದ ಸಾಪೇಕ್ಷವಾಗಿ. ಸತ್ಯವಸ್ತುವಿಗೆ ಮಿಥ್ಯಾವಸ್ತುವಿನ ಸಂಬಂಧವೇ ಇರುವುದಿಲ್ಲ. ಬಿಸಿಲ್ಗುದುರೆಯ ನೀರಿನಿಂದ ನದಿಯಲ್ಲಿ ಹೊಂಡ ಉಂಟಾಗುವುದಿಲ್ಲ.

ದ್ವೈತವು ಅಜ್ಞಾನಿಗಳಿಗೆ ಗೋಚರಿಸುತ್ತದೆ. ವ್ಯವಹಾರದಲ್ಲಿ ದ್ವೈತ ಉಂಟು. ಇದು ಮಿಥ್ಯೆ ಎಂದು ಹೇಳಿದ್ದು ವ್ಯವಹಾರಸಾಪೇಕ್ಷವಾಗಿ. ಪರಮಾರ್ಥವಾಗಿಯೋ ದ್ವೈತ ಇಲ್ಲವೇ ಇಲ್ಲ. ಅದು ಇದ್ದರೆ ತಾನೆ 'ಅದು ಸುಳ್ಳು' ಎಂದು ಹೇಳಬೇಕು! ಹ್ರದ ಎಂದರೆ ಮಡು. ನದಿಯಲ್ಲಿ ಮಡು (ಹೊಂಡ) ಇರುತ್ತದೆ. ನೀರಿದ್ದರೆ ಮಡು. ನೀರೇ ಇಲ್ಲದಾಗ–ಬಿಸಿಲ್ಗುದುರೆಯನ್ನು ನೋಡುತ್ತ ನದಿಯು ಹ್ರದಿನೀ ಎಂದು ಹೇಳುವುದು ಅಯುಕ್ತ. ಹಾಗೆಯೇ ಇದು.

ಬಹುನಾಭಿಹಿತೇನ ಕಿಮು ಕ್ರಿಯತೇ
ಶೃಣು ಸಂಗ್ರಹಮತ್ರ ವದಾಮಿ ತವ ।
ತ್ವಯಿ ಜಾಗರಿತಪ್ರಭೃತಿ ತ್ರಿತಯಂ
ಪರಿಕಲ್ಪಿತಮಿತ್ಯಸದೇವ ಸದಾ । । ೧೬೮

ಹೆಚ್ಚು ಹೇಳುವುದರಿಂದ ಪ್ರಯೋಜನವೇನು ? ಸಂಗ್ರಹವಾಗಿ ಈ ಮಾತನ್ನು ಹೇಳುತ್ತೇನೆ, ಕೇಳು. ಜಾಗ್ರತ್, ಸ್ವಪ್ನ, ಸುಷುಪ್ತಿ–ಇವು ಮೂರು ಕಲ್ಪಿತವಾದವುಗಳು. ಇವು ನಿನಗೆ ಇಲ್ಲವೇ ಇಲ್ಲ.

ಪರಿಕಲ್ಪಿತಮಿತ್ಯಸದಿತ್ಯುದಿತಂ
ಮನ ಇತ್ಯಭಿಶಬ್ದಿಮಾಗಮತಃ ।
ಉಪಪತ್ತಿಭಿರೇವ ಚ ಸಿದ್ಧಮತೋ
ಭವತೋಽನ್ಯದಶೇಷಮಭೋತಮಿತಿ ॥ ೧೭೯

(ಜನ್ಯವಾದದ್ದು ಅಸತ್ಯವೆಂಬ ನ್ಯಾಯದಿಂದ) ಈ ಪ್ರಕಾರವಾಗಿ ಕಲ್ಪಿತವಾಗಿರುವ ಜಗತ್ತು ಮಿಥ್ಯೆಯೆಂದು ಹೇಳಿದ್ದಾಗಿದೆ. ಹಾಗೆಯೇ ಶ್ರುತಿಯ ಆಧಾರದಿಂದಲೂ, ಮನಸ್ಸು ಸಹ ಮಿಥ್ಯೆಯೆಂದು ತೋರಿಸಿಕೊಡಲಾಗಿದೆ. ಆದಕಾರಣ, ಎಲೈ ಶಿಷ್ಯನೆ, ನಿನ್ನನ್ನು ಹೊರತಾಗಿ ಎಲ್ಲವೂ (ಆತ್ಮತಿರಿಕ್ತವೆಂಬುದೆಲ್ಲವೂ) ಮಿಥ್ಯೆಯೆಂದು ತಿಳಿ.

ಯದಬಾಹ್ಯಮನಂತರವೇಕರಸಂ
ಯದಕಾರ್ಯಮಕಾರಣ ಮದ್ವಯಕಮ್ ।
ಯದಶೇಷ ವಿಶೇಷ ವಿಹೀನತರಂ
ದೃಶಿರೂಪಮನಂತಮೃತಂ ತದಸಿ ॥ ೧೮೦

ಯಾವುದರ ಹೊರಗಾಗಲಿ ಒಳಗಾಗಲಿ ಇನ್ನೊಂದು ವಸ್ತುವಿಲ್ಲವೋ ಯಾವುದು ಚಿದೇಕರಸವಾಗಿದಯೋ ಯಾವುದಕ್ಕೆ ಕಾರ್ಯಕಾರಣಗಳಿಲ್ಲವೋ ಯಾವುದು ಅದ್ವಿತೀಯವುವೋ ಸಮಸ್ತ ವಿಶೇಷರಹಿತವಾಗಿ ನಿರ್ವಿಶೇಷವಾಗಿದೆಯೋ ಅಂತಹ ಅನಂತವೂ ಸತ್ಯವೂ ಆದ ದೃಗಾತ್ಮನೇ ನೀನಾಗಿದ್ದೇ.

1. ತದೇತದ್ ಬ್ರಹ್ಮಪೂರ್ವಮನಪರಮ ಬಾಹ್ಯಮಯಾತ್ಮಬ್ರಹ್ಮ (ಬೃಹ. ೨–೫–೧೯)

2. ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ (ಶ್ವೇತಾ. ೬–೮)

3. ಏಕಮೇವಾದ್ವಿತೀಯಮ್ (ಛಾಂ. ೬–೨–೧)

4. ಚಿದೇಕರಸಃ (ನೃಸಿಂಹ. ಉತ್ತರ. ೧)

5. ಸತ್ಯಂ ಜ್ಞಾನಮನಂತಂ ಬ್ರಹ್ಮ (ತೈ. ೨–೧)

6. ತತ್ತ್ವಮಸಿ ಛಾಂ ೬–೮–೭)

ಇತ್ಯಾದಿ ಶ್ರುತಿವಾಕ್ಯಗಳನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

ಇಯದೇವ ಮಯೋಪನಿಷತ್ಸು ಪದಂ
ಪರಮಂ ವಿದಿತಂ ನ ತತೋಽಸ್ತ್ಯಧಿಕಮ್ ।
ಇತಿ ಪಿಪ್ಪಲಭಕ್ಷ್ಯ ಇವಾಭ್ಯವದತ್
ಅವಶಿಷ್ಟಮತಿಂ ವಿನಿವಾರಯಿತುಮ್ ॥ ೧೭೧

ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ ಪರಬ್ರಹ್ಮತತ್ತ್ವವು ಇಷ್ಟೇ ಎಂದು ನಾನು ತಿಳಿದುಕೊಂಡಿದ್ದೇನೆ. ಇದಕ್ಕಿಂತ ಅಧಿಕವಾಗಿ ತಿಳಿಯಬೇಕಾದದ್ದು ಇಲ್ಲವೇ ಇಲ್ಲ ಎಂಬುದಾಗಿ, ಪಿಪ್ಪಲಾದಮುನಿಯು ಭರದ್ವಾಜಾದಿಗಳಿಗೆ ಹೇಳಿದಂತೆ ಗುರುವು ಶಿಷ್ಯನಿಗೆ ಹೇಳಿದನು. ತಿಳಿಯಬೇಕಾದ್ದು ಇನ್ನು ಅವಶಿಷ್ಟವಾಗಿದೆಯೆಂಬ ಬುದ್ಧಿಯನ್ನು ಹೋಗಲಾಡಿಸುವುದಕ್ಕಾಗಿ ಇನ್ನು ತಿಳಿಯಬೇಕಾದ್ದೇನೂ ಇಲ್ಲ ಎಂದು ಗುರುವು ಹೇಳಿದ್ದಾನೆ.

"ತಾನ್ ಹೋವಾಚ ಏತಾವದೇವಾಹಮೇತತ್ ಪರಂ ಬ್ರಹ್ಮ ವೇದ । ನಾತಃ ಪರಮಸ್ತೀತಿ" ಎಂಬ ಪ್ರಶ್ನೋಪನಿಷತ್ತಿನ ವಾಕ್ಯವನ್ನು (೬-೭) ಇಲ್ಲಿ ಸ್ಮರಿಸಿಕೊಳ್ಳಬೇಕು.

ಇತರೋಽಪಿ ಗುರುಂ ಪ್ರಣಿಪತ್ಯ ಜಗೌ
ಭಗವನ್ನಿತಿ ತಾರಿತವಾನಸಿ ಮಾಮ್।
ಅವಬೋಧತರೇಣ ಸಮುದ್ರಮಿಮಂ
ಮೃತಿಜನ್ಮಜಲಂ ಸುಖದುಃಖಝಷವಮ್ ॥ ೧೭೨

ಗುರುವು ಈ ರೀತಿ ಉಪದೇಶಿಸಲಾಗಿ ಶಿಷ್ಯನು ಗುರುವಿಗೆ ಸಾಷ್ಟಾಂಗ ನಮಸ್ಕಾರಮಾಡಿ ಹೀಗೆಂದನುಃ "ಹೇ ಭಗವನ್, ನನ್ನನ್ನು ಉದ್ಧಾರಮಾಡಿದಿರಿ. ಜನನ ಮರಣಗಳೆಂಬ ಜಲದಿಂದ ತುಂಬಿರುವ, ಸುಖದುಃಖಗಳೆಂಬ ಮೀನುಗಳಿಂದ ಕೂಡಿದ ಈ ಸಂಸಾರ ಸಾಗರವನ್ನು ಜ್ಞಾನವೆಂಬ ನೌಕೆಯಿಂದ ದಾಟಿಸಿದ್ದೀರಿ.

ಅಧುನಾಸ್ಮಿ ಸುನಿರ್ವೃತ ಆತ್ಮರತಿಃ
ಕೃತಕೃತ್ಯ ಉಪೇಕ್ಷಕ ಏಕಮನಾಃ ।
ಪ್ರಹಸನ್ ವಿಷಯಾನ್ ಮೃಗತೋಯಸಮಾನ್
ವಿಚರಾಮಿ ಮಹೀಂ ಭವತಾ ಸಹಿತಃ ॥ ೧೭೩

ಈಗ ನಾನು ಆತ್ಮರಾಮನೂ ಕೃತಕೃತ್ಯನೂ ಆಗಿ ಅತ್ಯಂತ ಆನಂದದಲ್ಲಿ ಮುಳುಗಿದ್ದೇನೆ. ಲೋಕವ್ಯವಹಾರದಲ್ಲಿ ಉದಾಸೀನನೂ ಆತ್ಮೈಕಮನಸ್ಕನೂ ಆಗಿದ್ದೇನೆ. ಬಿಸಿಲ್ಗುದುರೆಗಳಂತೆ ಇರುವ ವಿಷಯಗಳನ್ನು ಅಪಹಾಸ್ಯಮಾಡಿ ಧಿಕ್ಕರಿಸಿ, ನಿಮ್ಮೊಡನೆ ಲೋಕದಲ್ಲಿ ಸಂಚಾರ ಮಾಡುತ್ತ ಇರುವೆನು.

ತವ ದಾಸ್ಯಮಹಂ ಭೃಶಮಾಮಾರಣಾತ್
ಪ್ರತಿಪದ್ಯ ಶರೀರಧೃತಿಂ ಭಗವನ್ ।
ಕರವಾಣಿ ಮಯಾ ಶಕನೀಯಮಿದಂ
ತವ ಕರ್ತುಮತೋऽನ್ಯದಶಕ್ಯಮಿತಿ ॥ ೧೭೪

"ಹೇ ಭಗವನ್, (ಪ್ರಾರಬ್ಧದಿಂದ ಬಂದ) ಈ ಶರೀರವನ್ನು ಧರಿಸಿಕೊಂಡು ಮರಣವು ಬರುವವರೆಗೂ ನಿಮ್ಮ ದಾಸ್ಯವನ್ನು ಮಾಡುತ್ತ ಇರುವೆನು. ನನ್ನಿಂದ ನಿಮಗೆ ಉಪಕಾರಮಾಡಲು ಸಾಧ್ಯವಾಗತಕ್ಕದ್ದು ಇಷ್ಟೇ ಸರಿ. ಇದಕ್ಕಿಂತ ಹೆಚ್ಚಿನದು ನನಗೆ ಶಕ್ಯವಲ್ಲ"–ಹೀಗೆಂದು ಹೇಳಿದನು.

೧. ತ್ವಂ ಹಿ ನಃ ಪಿತಾ ಯೋऽಸ್ಮಾಕಮವಿದ್ಯಾಯಾಃ ಪರ ಪಾರಂ
ತಾರಯಸೀತಿ (ಪ್ರಶ್ನ ೬–೮)

೨. ಸೋऽಹಂ ಭಗವತೇ ವಿದೇಹಾನ್ ದಾಸ್ಯಾಮಿ ಮಾಂ ಚಾಪಿ ಸಹ ದಾಸ್ಯಮಿತಿ
(ಬೃಹ ೪–೪–೨೩)

ಎಂಬ ವಾಕ್ಯಗಳನ್ನಿಲ್ಲಿ ಸ್ಮರಿಸಿಕೊಳ್ಳಬೇಕು.

ಗುರುಶಿಷ್ಯಕಥಾಶ್ರವಣೇನ ಮಯಾ
ಶ್ರುತಿವಚ್ಛ್ರುತಿ ಸಾರಸಮುದ್ಧರಣಮ್ ।
ಕೃತಮಿತ್ಥಮವೈತಿ ಯ ಏತದಸೌ
ನ ಪತತ್ಯುದಧೌ ಮೃತಿಜನ್ಮಜಲೇ ॥ ೧೭೫

ಉಪನಿಷತ್ತುಗಳಲ್ಲಿ ಗುರು ಶಿಷ್ಯಸಂವಾದವು ಶ್ರುತವಾಗಿದೆ. ಅದೇಬಗೆಯ ಸಂವಾದರೂಪದಿಂದ ನಾನು 'ಶ್ರುತಿಸಾರಸಮುದ್ಧರಣ' ವೆಂಬ ಈ ಗ್ರಂಥವನ್ನು ಈ ಪ್ರಕಾರವಾಗಿ ರಚಿಸಿದ್ದೇನೆ. ಯಾವಾತನು ಇದರ ತತ್ತ್ವಾರ್ಥವನ್ನು ಸರಿಯಾಗಿ ತಿಳಿದುಕೊಂಡು ಜ್ಞಾನಿಯಾಗುತ್ತಾನೋ ಅವನು ಹುಟ್ಟುಸಾವುಗಳೆಂಬ ಜಲದಿಂದ ತುಂಬಿದ ಸಂಸಾರಸಮುದ್ರದಲ್ಲಿ ಬೀಳುವುದಿಲ್ಲ.

**ವಿವರಣೆ:–** ಇದು ಶ್ರುತಿಸಾರವನ್ನು ಎತ್ತಿ ಸಂಗ್ರಹಿಸಿದ ಗ್ರಂಥ ಇದರ ಅರ್ಥವನ್ನರಿತು ಬ್ರಹ್ಮಜ್ಞಾನಿಯಾದವನಿಗೆ ಪುನರ್ಜನ್ಮವಿಲ್ಲ. ಈ ಗ್ರಂಥದ ನಾಲ್ಕನೇಯ ಶ್ಲೋಕದಲ್ಲಿ ಶಿಷ್ಯನು ತನ್ನ ಕಷ್ಟವನ್ನು ಹೇಳಿಕೊಂಡದಕ್ಕೆ ಈ ಉತ್ತರವು ಉಪಸಂಹಾರ ರೂಪವಾಗಿ ಬಂದಿದೆ. ಶಾರೀರಿಕ ಸೂತ್ರಗಳಲ್ಲಿ 'ಅನಾವೃತ್ತಿಃ ಶಬ್ದಾತ್ ಅನಾವೃತ್ತಿಃ ಶಬ್ದಾತ್' ಎಂಬುದು ಕಡೆಯಸೂತ್ರ. 'ತೇಷಾಂ ನ ಪುನರಾವೃತ್ತಿಃ' (ಬ್ರಹ್ಮ.

೬-೨-೧೫), 'ಇಮಂಮಾನವಮಾವರ್ತಂ ನಾವರ್ತಂತೇ' (ಛಾಂ. ೪-೧೫-೬) ಇತ್ಯಾದಿ ವೇದವಾಕ್ಯಗಳಿಂದ ಜ್ಞಾನಿಗೆ ಸಂಸಾರದಲ್ಲಿ ಪುನಃ ಪತನವಿಲ್ಲ, ಅವನಿಗೆ ಪುನರ್ಜನ್ಮವಿಲ್ಲ-ಎಂದು ಸ್ಫುಟವಾಗಿ ತಿಳಿದು ಬರುತ್ತದೆ.

**ಭಗವದ್ಭಿರಿದಂ ಗುರುಭಕ್ತಿಯುತೈಃ**
**ಪಠಿತವ್ಯಮುಪಾಠ್ಯಮತೋಽನ್ಯಜನೈಃ ।**
**ಗುರುಭಕ್ತಿಮತಃ ಪ್ರತಿಭಾತಿ ಯತೋ**
**ಗುರುಣೋಕ್ತಮತೋಽನ್ಯ ಭಜನ್ನ ಪಠೇತ್ ॥** ೧೭೬

ದೃಢವಾದ ಗುರುಭಕ್ತಿಯುಳ್ಳ ಭಾಗ್ಯಶಾಲಿಗಳು ಈ ಗ್ರಂಥವನ್ನು ಅಧ್ಯಯನ ಮಾಡಬೇಕು. ಉಳಿದವರು ಇದಕ್ಕೆ ಕೈಹಾಕಬಾರದು. ಏಕೆಂದರೆ, ಗುರುವು ಉಪದೇಶಿಸುವದರ ತತ್ತ್ವಾರ್ಥವು ಗುರುಭಕ್ತಿಯುಳ್ಳವರಿಗೆ ಮಾತ್ರ ತಿಳಿಯುತ್ತದೆ. ಆದ್ದರಿಂದ ಗುರುಭಕ್ತಿಯಿಲ್ಲದ ವಿಷಯಾಸಕ್ತರು ಇದನ್ನು ಓದಬಾರದು.

**ವಿವರಣೆ :-** ಶ್ಲೋಕದಲ್ಲಿರುವ 'ಭಗವದ್ಭಿಃ' ಎಂಬ ಪದಕ್ಕೆ 'ಸಂನ್ಯಾಸಿಗಳಿಂದ' ಎಂಬ ಅರ್ಥ ಸರಿಯಾಗಿ ಹೊಂದುತ್ತದೆ. ಆದರೆ ಸಾಧನಚತುಷ್ಟಯ ಸಂಪನ್ನರಾದ ಭಕ್ತಿಯುತ ಶಿಷ್ಯರೂ ವೇದಾಮತ್ರಶ್ರವಣದಿಂದ ಕೃತಕೃತ್ಯರಾಗಬಹುದೆಂಬುದಕ್ಕೆ ಆಧಾರಗಳಿವೆ. ಆದ್ದರಿಂದ ಇಲ್ಲಿ 'ಭಾಗ್ಯಶಾಲಿಗಳು' ಎಂದು ಶಬ್ದದ ಯೌಗಿಕಾರ್ಥವನ್ನು ಹಿಡಿದಿದೆ. ಸಾಧನಚತುಷ್ಟಯ=ನಿತ್ಯಾನಿತ್ಯವಸ್ತು ವಿವೇಕ, ಇಹಾ ಮುತ್ರ ಫಲ ಭೋಗವಿರಾಗ, ಶಮಾದಿಷಟ್ಕಸಂಪತ್ತಿ ಮತ್ತು ಮುಮುಕ್ಷುತ್ವ.

ಗುರುಭಕ್ತಿಯ ಅವಶ್ಯಕತೆ -

**ನಿಗಮೋಽಪಿ ಚ ಯಸ್ಯ ಇತಿಪ್ರಭೃತಿಃ**
**ಗುರುಭಕ್ತಿಮತಃ ಕಥಿತಂ ಗುರುಣಾ ।**
**ಪ್ರತಿಭಾತಿ ಮಹಾತ್ಮನ ಇತ್ಯವದತ್**
**ಪಠಿತವ್ಯಮತೋ ಗುರುಭಕ್ತಿಯುತೈಃ ॥** ೧೭೭

**ಯಸ್ಯದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥**
**(ಶ್ವೇತಾ೬-೨೩)**

ಎಂಬುದಾಗಿ 'ಯಸ್ಯ' ಎಂದು ಆರಂಭವಾದ ಈ ವೇದವಚನವು 'ಗುರು ಭಕ್ತಿಯುಳ್ಳ ಮಹಾತ್ಮನಿಗೆ ಗುರುವು ಉಪದೇಶಿಸಿದ ತತ್ತ್ವದ ರಹಸ್ಯವು

ಹೊಳೆಯುತ್ತದೆ' ಎಂದು ಹೇಳಿದೆ. ಆದ್ದರಿಂದ ಗುರುಭಕ್ತಿಯುಳ್ಳವರು ಮಾತ್ರ ಈ ಗ್ರಂಥದ ಅಧ್ಯಯನ ಮಾಡಬೇಕು.

ಗ್ರಂಥ ಸಮಾಪ್ತಿಯಲ್ಲಿ ಮಂಗಳಾಚರಣ (ಸ್ಥಗ್ದರಾ ವೃತ್ತ)

ಯೇಷಾಂ ಧೀಸೂರ್ಯದೀಪ್ತ್ಯಾ ಪ್ರತಿಹತಮಗ
ಮನ್ನಾಶಮೇಕಾಂತತೋ ಮೇ
ಧ್ವಾಂತಂ ಸ್ವಾಂತಸ್ಯ ಹೇತುರ್ಜನನ ಮರಣ
ಸಂತಾನ ದೋಲಾಧಿ ರೂಢೇಃ ।
ಯೇಷಾಂ ಪಾದೌ ಪ್ರಪನ್ನಾಃ ಶ್ರುತಿಶಮ ವಿನಯೈ
ರ್ಭೂಷಿತಾಃ ಶಿಷ್ಯ ಸಂಘಾಃ ।
ಸದ್ಯೋ ಮುಕ್ತಾಃ ಸ್ಥಿತಾಸ್ತಾನ್ ಯತಿವರಮಹಿತಾನ್
ಯಾವ ದಾಯುರ್ನಮಾಮಿ ॥ ೧೭೮

ಜನನ ಮರಣ ಪರಂಪರೆಯೆಂಬ ತೂಗು ಮಂಚವನ್ನೇರಲು ಕಾರಣವಾದ ಯಾವ ನನ್ನ ಅಂತಃಕರಣದ ಅಜ್ಞಾನವೆಂಬ ಕತ್ತಲೆ ಇದ್ದಿತೋ, ಅದು ಯಾವ ಗುರುವರ್ಯರ ಬುದ್ಧಿಯೆಂಬ ಸೂರ್ಯ ಪ್ರಕಾಶದಿಂದ ತಾಡಿತವಾಗಿ ಸಂಪೂರ್ಣನಾಶ ವನ್ನು ಹೊಂದಿತೋ ಮತ್ತು ಶ್ರುತಿ-ಶಮ-ವಿನಯ ಭೂಷಿತರಾದ ಶಿಷ್ಯರು ಯಾವ ಗುರುವರ್ಯರ ಪಾದಗಳಿಗೆ ಶರಣಾಗತರಾದರೆ ಜೀವನ್ಮುಕ್ತರೇ ಆಗಿಬಿಡುತ್ತಾರೋ ಅಂತಹ ಯತಿವರ ಪೂಜಿತರಾದ ಶ್ರೀ ಶಂಕರಭಗವತ್ಪಾದರಿಗೆ ನಾನು ಬದುಕಿರುವ ವರೆಗೂ ಸಮಸ್ಕರಿಸುತ್ತ ಇರುವೆನು.

ಭೂಃ ಪಾದೌ ಯಸ್ಯ ನಾಭಿರ್ವಿಯದಸುರನಿಲ-
ಶ್ಚಂದ್ರಸೂರ್ಯೌ ಚ ನೇತ್ರೇ
ಕರ್ಣಾವಾಶಾಃ ಶಿರೋ ದ್ಯೌರ್ಮುಖಮಪಿ ದಹನೋ
ಯಸ್ಯ ವಾಸ್ತೇಯಮಬ್ಧಿಃ ।
ಅಂತಃಸ್ಥಂ ಯಸ್ಯ ವಿಶ್ವಂ ಸುರ-ನರ-ಖಗ-ಗೋ-
ಭೋಗಿ-ಗಂಧರ್ವ-ದೈತ್ಯೈಃ
ಚಿತ್ರಂ ರಂರಮ್ಯತೇ ತಂ ತ್ರಿಭುವನವಪುಷಂ
ವಿಷ್ಣುಮೀಶಂ ನಮಾಮಿ ॥ ೧೭೯

ಇತಿ ಶ್ರೀಶಂಕರಭಗವತ್ಪಾದ ಶಿಷ್ಯ ಶ್ರೀತೋಟಕಾಚಾರ್ಯ ವಿರಚಿತಂ ಶ್ರುತಿಸಾರ ಸಮುದ್ಧರಣಂ ಸಮಾಪ್ತಮ್

ಪೃಥ್ವಿಯು ಯಾವಾತನ ಪಾದಗಳೋ, ಆಕಾಶವು ಉದರವೋ, ವಾಯುವೇ ಪ್ರಾಣವೋ, ಚಂದ್ರಸೂರ್ಯರೇ ಕಣ್ಣುಗಳೋ, ದಿಕ್ಕುಗಳು ಕಿವಿಗಳೋ, ಆಕಾಶವು ಶಿರಸ್ಸೋ, ಅಗ್ನಿಯು ಮುಖವೋ, ಸಮುದ್ರವು ಮೂತ್ರಾಶಯಸ್ಥಾನವೋ ಮತ್ತು ಯಾವಾತನ ಒಳಗಡೆ ಈ ವಿಶ್ವವು ಅಡಗಿದೆಯೋ ಯಾವಾತನು ದೇವ ಮನುಷ್ಯ –ಪಕ್ಷಿ–ಗೋವು– ಹಾವು–ಗಂಧರ್ವ –ದೈತ್ಯರೊಡನೆ ವಿಚಿತ್ರ ರೀತಿಯಲ್ಲಿ ಕ್ರೀಡಿಸುತ್ತಿರುವನೋ ಅಂತಹ ತ್ರಿಲೋಕ ಶರೀರಿಯೂ ಈಶ್ವರನೂ ಆದ ಶ್ರೀವಿಷ್ಣುವನ್ನು ನಮಸ್ಕರಿಸುತ್ತೇನೆ.

ಇಲ್ಲಿಗೆ ತೋಟಕಾಚಾರ್ಯರ ವಿರಚಿತವಾದ ಶ್ರುತಿಸಾರ ಸಮುದ್ಧರಣವೆಂಬ ವೇದಾಂತಗ್ರಂಥವು ಸಮಾಪ್ತವಾಯಿತು.



# ಶ್ರೀತೋಟಕಾಚಾರ್ಯಪ್ರಣೀತಂ
# ತೋಟಕಾಷ್ಟಕಮ್

ವಿದಿತಾಖಿಲಶಾಸ್ತ್ರಸುಧಾಜಲಧೇ
ಮಹಿತೋಪನಿಷತ್ಕಥಿತಾರ್ಥನಿಧೇ ।
ಹೃದಯೇ ಕಲಯೇ ವಿಮಲಂ ಚರಣಂ
ಭವ ಶಂಕರದೇಶಿಕ ಮೇ ಶರಣಮ್ ॥ ೧ ॥

ಕರುಣಾವರುಣಾಲಯ ಪಾಲಯ ಮಾಂ
ಭವಸಾಗರದುಃಖವಿದೂನಹೃದಮ್ ।
ರಚಿತಾಖಿಲದರ್ಶನತತ್ತ್ವರುಚಿಂ
ಭವ ಶಂಕರದೇಶಿಕ ಮೇ ಶರಣಮ್ ॥ ೨ ॥

ಭವತಾ ಜನತಾ ಸುಹಿತಾ ಭವಿತಾ
ನಿಜಬೋಧವಿಚಾರಣಚಾರುಮತೇ ।
ಕಲಯೇಶ್ವರಜೀವವಿವೇಕವಿದಂ
ಭವ ಶಂಕರದೇಶಿಕ ಮೇ ಶರಣಮ್ ॥ ೩ ॥

ಭವ ಏವ ಭವಾನಿತಿ ಮೇ ನಿತರಾಂ
ಸಮಜಾಯತ ಚೇತಸಿ ಕೌತುಕಿತಾ ।
ಮಮ ವಾರಯ ಮೋಹಮಹಾಜಲಧಿಂ
ಭವ ಶಂಕರದೇಶಿಕ ಮೇ ಶರಣಮ್ ॥ ೪ ॥

ಸುಕೃತೇಽಧಿಕೃತೇ ಬಹುಧಾ ಭವತೋ
ಭವಿತಾ ಪದದರ್ಶನಲಾಲಸತಾ ।
ಅತಿದೀನಮಿಮಂ ಪರಿಪಾಲಯ ಮಾಂ
ಭವ ಶಂಕರದೇಶಿಕ ಮೇ ಶರಣಮ್ ॥ ೫ ॥

ಜಗತೀಮವಿತುಂ ಕಲಿತಾಕೃತಯೋ
ವಿಚರಂತಿ ಮಹಾಮಹಸಶ್ಛ ಪರಮ್ ।
ಅಹಿಮಾಂಶುರಿವಾತ್ರ ವಿಭಾಸಿ ಗುರೋ
ಭವ ಶಂಕರದೇಶಿಕ ಮೇ ಶರಣಮ್ ॥ ೬ ॥

ವಿದಿತಾ ನ ಮಯಾ ವಿಶದೈಕಕಲಾ
ನ ಚ ಕಿಂಚನ ಕಾಂಚನಮಸ್ತಿ ಗುರೋ ।
ದ್ರುತಮೇವ ವಿಧೇಹಿ ಕೃಪಾಂ ಸಹಜಾಂ
ಭವ ಶಂಕರದೇಶಿಕ ಮೇ ಶರಣಮ್ ॥ ೭ ॥

ಭಗವನ್ನುದಧೌ ಮೃತಿಜನ್ಮಜಲೇ
ಸುಖದುಃಖಝುಷೇ ಪತಿತಂ ವ್ಯಥಿತಮ್ ।
ಕೃಪಯಾ ಶರಣಾಗತಮುದ್ಧರ ಮಾಂ
ಅನುಶಾದ್ಧ್ಯುಪಪನ್ನಮನನ್ಯಗತಿಮ್ ॥ ೮ ॥



# ಶ್ಲೋಕಾನುಕ್ರಮಣಿಕೆ

## ಗ



## ಚ



## ಜ



## ತ



## ದ



## ನ

ಭಗವತ್ಪಾದರ ಕೃಪೆಯಿಂದ ಹೊರಹೊಮ್ಮಿದ ಮತ್ತು ಅವರ ಸಾಕ್ಷಾತ್ ಶಿಷ್ಯರ ಮುಖದಿಂದ ಬಂದ ಈ ಗ್ರಂಥವು ಆಚಾರ್ಯರ ಸಿದ್ಧಾಂತವನ್ನು ಪ್ರಾಮಾಣಿಕವಾಗಿ ಪ್ರತಿಪಾದಿಸುತ್ತದೆ.

ವೇದಾಂತದ ತಿರುಳನ್ನು ಸರಳ ಭಾಷೆಯಲ್ಲಿ ಸಾಮಾನ್ಯರಿಗೂ ಅರ್ಥವಾಗುವಂತೆ ತಿಳಿಯಹೇಳ ಬೇಕೆಂಬುದು ಶ್ರೀ ತೋಟಕಾಚಾರ್ಯರ ಮುಖ್ಯ ಉದ್ದೇಶವಾಗಿದೆ.

ಇದರಲ್ಲಿ ವಾದಕೋಲಾಹಲವಿಲ್ಲ. ಪಂಡಿತ ಪ್ರಿಯವೆನಿಸುವ ಅವಚ್ಛೇದಕಾವಚ್ಛಿನ್ನಗಳ ಅರಣ್ಯ ವಿಲ್ಲ. ಪಾರಿಭಾಷಿಕ ವಿಷಯಗಳನ್ನೆತ್ತಿ ಧೀರ್ಘ ಸಮಾಸಗಳಿಂದ ಪರಿಷ್ಕರಿಸುವ ಹಂಬಲವಿಲ್ಲ.

ಮೊಸರನ್ನು ಕಡೆದು ತೆಗೆದ ಬೆಣ್ಣೆಯಂತೆ, ಶ್ರುತಿ ಸಾಗರವನ್ನು ಬುದ್ಧಿಯೆಂಬ ಕಡೆಗೋಲಿನಿಂದ ಕಡೆದು ಉದ್ಧರಿಸಿ ತೆಗೆದ ಬೆಣ್ಣೆ ಇದು.

ಶ್ರುತಿಮನೋಹರವಾದ ಈ ಶ್ಲೋಕಗಳು ಗೇಯಕಾವ್ಯದಂತೆ ಹಾಡಲು ಯೋಗ್ಯವಾದವು.

– ಪ್ರಸ್ತಾವನೆಯಿಂದ

